KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜನವರಿ ೮, ೨೦೦೯ (ಪುಷ್ಯ ೧೮, ಶಕ ವರ್ಷ ೧೯೩೦) | ಸಂಚಿಕೆ ೨ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಜೈವಿಕ ಕೇಂದ್ರ**
**ತೋಟಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ**
**ಅಂಚೆ ಪೆಟ್ಟಿಗೆ ಸಂಖ್ಯೆ:**7648, **ಹುಳಿಮಾವು, ಬನ್ನೇರುಘಟ್ಟ ರಸ್ತೆ, ಬೆಂಗಳೂರು**–560076
**ಇ–ಮೇಲ್:** biocentre.hulimavu@gmail.com **ವೆಬ್‌ಸೈಟ್: www.horticulture.kar.nic.in**

**ಟೆಂಡರ್ ಪ್ರಕಟಣೆ ಸಂಖ್ಯೆ:ತೋಇ:ಜಂನಿ(ಜೀವತಾ):ತಾಸ:22:2007–08 ದಿನಾಂಕ:01ನೇ ಜನವರಿ 2009**

**ಮೈಸೂರು, ಶಿವಮೊಗ್ಗ, ಕೊಪ್ಪಳ ಮತ್ತು ಬೀದರ್ ನಲ್ಲಿ ಜೈವಿಕ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ತಾಂತ್ರಿಕ ಸಲಹೆಗಾರರ ನೇಮಕಾತಿಗಾಗಿ ಟೆಂಡರ್ ಆಹ್ವಾನ ಸೂಚನೆ.**

ಮೈಸೂರು, ಶಿವಮೊಗ್ಗ, ಕೊಪ್ಪಳ ಮತ್ತು ಬೀದರ್ ನಲ್ಲಿ ಜೈವಿಕ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ತಾಂತ್ರಿಕ ಸಲಹೆಗಾರರನ್ನು ಟರ್ನ್ ಕೀ ಆಧಾರದ ಮೇಲೆ ನೇಮಿಸಿಕೊಳ್ಳಲು, ನುರಿತ ತಂತ್ರಜ್ಞ ಹಾಗೂ ಅನುಭವಿ ಸಂಸ್ಥೆಗಳಿಂದ ಮೊಹರಾದ ಹಾಗೂ ಮೇಲ್ಬರಹದ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಆಹ್ವಾನಿಸಿದೆ. 2008–09 ರಿಂದ 2011–2012 ರವರೆಗಿನ 4 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳ್ಳಲಿರುವ 4 ಜೈವಿಕ ಕೇಂದ್ರಗಳ ಯೋಜನೆಯ ಒಟ್ಟಾರೆ ಅಂದಾಜು ವೆಚ್ಚ ರೂ.26.40 ಕೋಟಿಗಳಾಗಿರುತ್ತದೆ.

ಸಲಹಾ ಸೇವೆಯ ಸೇವಾ ವ್ಯಾಪ್ತಿ ಹಾಗೂ ಟೆಂಡರ್‌ನ ವಿವರವಾದ ಷರತ್ತುಗಳು ಮತ್ತು ನಿಬಂಧನೆಗಳನ್ನೊಳಗೊಂಡ ಟೆಂಡರ್ ದಾಖಲಾತಿಗಳನ್ನು ತೋಟಗಾರಿಕೆ ಜಂಟಿ ನಿರ್ದೇಶಕರು, ಜೈವಿಕ ಕೇಂದ್ರ, ಹುಳಿಮಾವು, ಬೆಂಗಳೂರು ರವರ ಕಛೇರಿಯಿಂದ ಪಡೆಯಬಹುದಾಗಿರುತ್ತದೆ. ಆಸಕ್ತ ಟೆಂಡರ್‌ದಾರರು ಟೆಂಡರ್ ದಾಖಲಾತಿಗಳನ್ನು ದಿನಾಂಕ: 05–01–2009 ರಿಂದ 15–01–2009 ವರೆಗೆ ಕಛೇರಿ ವೇಳೆಯಲ್ಲಿ (ಬೆಳಿಗ್ಗೆ 10.00 ರಿಂದ ಸಾಯಂಕಾಲ: 5.30 ರವರೆಗೆ), ಟೆಂಡರ್ ದಾಖಲಾತಿ ಮೊತ್ತ ರೂ.500/– + 12.5% ತೆರಿಗೆ (ಅಂಚೆ ಮೂಲಕ ರವಾನಿಸುವುದಾದರೆ ರೂ.50/–ಗಳನ್ನು ಪ್ರತ್ಯೇಕವಾಗಿ ನೀಡುವುದು) ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ **ತೋಟಗಾರಿಕೆ ಉಪ ನಿರ್ದೇಶಕರು (ಅಂಗಾಂಶ ಕೃಷಿ), ಜೈವಿಕ ಕೇಂದ್ರ, ಹುಳಿಮಾವು** ರವರ ಹೆಸರಿನಲ್ಲಿ ಪಡೆದ ಡಿ.ಡಿ. (ವರ್ಗಾಹಿಸಲಾಗದಂತಹ / ಹಿಂದಿರುಗಿಸಲಾಗದಂತಹ) ರೂಪದಲ್ಲಿ ಪಾವತಿಸಿ ಪಡೆಯಬಹುದಾಗಿರುತ್ತದೆ. ಪೂರ್ತಿಯಾಗಿ ಮೊಹರಾದ ಟೆಂಡರ್ ಲಕೋಟೆಯ ಜೊತೆಗೆ ಇ.ಎಂ.ಡಿ. ಮೊತ್ತ ರೂ.1,00,000/– (ಒಂದು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ **ತೋಟಗಾರಿಕೆ ಉಪ**

**ನಿರ್ದೇಶಕರು (ಅಂಗಾಂಶ ಕೃಷಿ), ಜೈವಿಕ ಕೇಂದ್ರ, ಹುಳಿಮಾವು** ರವರ ಹೆಸರಿನಲ್ಲಿ ಪಡೆದ (ವರ್ಗಾಹಿಸಲಾಗದಂತಹ / ಹಿಂದಿರುಗಿಸಲಾಗದಂತಹ) ಡಿ.ಡಿ. ಯೊಂದಿಗೆ, ದಿನಾಂಕ: 27–01–2009 ರ ಅಪರಾಹ್ನ: 1.30 ರೊಳಗೆ ಸಲ್ಲಿಸತಕ್ಕದ್ದು. ತಾಂತ್ರಿಕ ಲಕೋಟೆಗಳನ್ನು ಆ ದಿನವೇ (27–01–2009) ಅಪರಾಹ್ನ: 4.00 ಗಂಟೆಗೆ ಸಂಬಂಧಿಸಿದ ಟೆಂಡರ್‌ದಾರರು/ ಅವರ ಅಧಿಕೃತ ಪ್ರತಿನಿಧಿಯ ಸಮ್ಮುಖದಲ್ಲಿ ತೆರೆಯಲಾಗುವುದು. ಹಣಕಾಸು ಲಕೋಟೆಗಳನ್ನು ದಿನಾಂಕ:28–01–2008 ರ ಅಪರಾಹ್ನ 3.00 ಗಂಟೆಗೆ ಟೆಂಡರ್‌ದಾರರು/ ಅವರ ಅಧಿಕೃತ ಪ್ರತಿನಿಧಿಯ ಸಮ್ಮುಖದಲ್ಲಿ, ತೋಟಗಾರಿಕೆ ಜಂಟಿ ನಿರ್ದೇಶಕರು, ಜೈವಿಕ ಕೇಂದ್ರ ರವರ ಕಛೇರಿಯಲ್ಲಿ ತೆರೆಯಲಾಗುವುದು. ಯಾವುದೇ / ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಧಿಕಾರವನ್ನು ಈ ಕೆಳಗಿನ ಸಹಿದಾರರು ಹೊಂದಿರುತ್ತಾರೆ.

ತೋಟಗಾರಿಕೆ ನಿರ್ದೇಶಕರು

## ಜೈವಿಕ ಕೇಂದ್ರ
## (ತೋಟಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ)

**ಮೈಸೂರು, ಶಿವಮೊಗ್ಗ, ಕೊಪ್ಪಳ ಮತ್ತು ಬೀದರ್ ನಲ್ಲಿ ಜೈವಿಕ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ತಾಂತ್ರಿಕ ಸಲಹೆಗಾರರ ನೇಮಕಾತಿಗಾಗಿ ಟೆಂಡರ್ ಆಹ್ವಾನ ಸೂಚನೆ.**

**ಯೋಜನೆಯ ಕಾರ್ಯಸ್ವರೂಪ :**

**ಯೋಜನೆ ತಯಾರಿ, ವಿನ್ಯಾಸ ಸಿದ್ಧಪಡಿಸುವಿಕೆ, ಯೋಜನೆ ಅನುಷ್ಠಾನಕ್ಕೆ ಟೆಂಡರ್ ಪ್ರಕ್ರಿಯೆ ತಯಾರಿ, ಆ ಪ್ರಕಾರ ಟರ್ನ್ ಕಿ ಆಧಾರದ ಮೇಲೆ ಅನುಷ್ಠಾನ, ಒಟ್ಟಾರೆ ಉಸ್ತುವಾರಿ, ಚೆಕ್ ಮೆಜರ್‌ಮೆಂಟ್ ಮತ್ತು ಗುಣಮಟ್ಟ ನಿಯಂತ್ರಣ.**

**ಯೋಜನಾ ವೆಚ್ಚ :**

(a) ಯೋಜನೆಯ ಒಟ್ಟು ಅಂದಾಜು ವೆಚ್ಚ : ರೂ.2640.00 ಲಕ್ಷಗಳು

(b) ಕೇಂದ್ರವಾರು ಮತ್ತು ವಾರ್ಷಿಕವಾರು ಹಣಕಾಸು ವಿಭಜನಾ ವಿವರಗಳು;

| **ಕೇಂದ್ರದ ಹೆಸರು** | **ಹಣಕಾಸು ವರ್ಷ (ರೂ.ಲಕ್ಷಗಳಲ್ಲಿ)** | | | | **ಒಟ್ಟು** |
|---|---|---|---|---|---|
| | **2008–09** | **2009–2010** | **2010–11** | **2011–12** | |
| ಮೈಸೂರು | 175.00 | 125.00 | 200.00 | 160.00 | **660.00** |
| ಶಿವಮೊಗ್ಗ | 175.00 | 125.00 | 200.00 | 160.00 | **660.00** |
| ಕೊಪ್ಪಳ | 175.00 | 125.00 | 200.00 | 160.00 | **660.00** |
| ಬೀದರ್ | 175.00 | 125.00 | 200.00 | 160.00 | **660.00** |
| **ಒಟ್ಟು** | **700.00** | **500.00** | **800.00** | **640.00** | **2640.00** |

**ಯೋಜನಾ ಅನುಷ್ಠಾನ ಅವಧಿ :**

- ಯೋಜನೆ ಮತ್ತು ವಿನ್ಯಾಸಕ್ಕೆ ಅಂತಿಮ ರೂಪು–ರೇಷೆ ಕಲ್ಪಿಸುವುದು 28-2-2009
- ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸುವುದು ಮತ್ತು ವಿವಿಧ ಏಜೆನ್ಸಿಗಳಿಗೆ ಟೆಂಡರ್ ಆದೇಶ ನೀಡುವುದು 31-3-2009
- ಕಾಮಗಾರಿ ಕಾರ್ಯಗಳ ಸಂಪೂರ್ಣ ಅನುಷ್ಠಾನ 31-12-2009
- (a) ಪಾಲಿಹೌಸ್, ನೆರಳು ಪರದೆ ಮನೆ, ನೀರು ಕೊಯ್ಲು ನಿರ್ವಹಣೆ, ಸಾವಯವ ಘಟಕಗಳ ಅಭಿವೃದ್ಧಿ 31-12-2010
  (b) ಅಂತರ್ ವಿಭಜಕಗಳು ಮತ್ತು ವಿದ್ಯುತ್ ಕಾಮಗಾರಿ ಪೂರ್ಣಗೊಳಿಸುವುದು 31-12-2010
- ಯಂತ್ರೋಪಕರಣಗಳ ಖರೀದಿ ಮತ್ತು ಅಳವಡಿಕೆ 31-12-2011
- ಅಂತಿಮ ಸಿದ್ಧತೆ, ಜೈವಿಕ ಕೇಂದ್ರಗಳ ಕಾರ್ಯಾರಂಭ ಹಾಗೂ ತೋಟಗಾರಿಕೆ ಇಲಾಖೆಗೆ ಹಸ್ತಾಂತರಗೊಳಿಸುವುದು 31.3.2012

**ಸಲಹೆ / ಸೇವೆಯ ಕಾರ್ಯಕ್ಷೇತ್ರ ವ್ಯಾಪ್ತಿ :**

- ಸ್ಥಳ ಸೂಕ್ತತೆ ಕುರಿತು ವಿವರವಾದ ಅಧ್ಯಯನ ನಡೆಸುವುದು.
- ಪರಿಸರ ಸ್ನೇಹಿ ತಂತ್ರಜ್ಞಾನಗಳಾದಂತಹ ಕಡಿಮೆ ಶಕ್ತಿ ಬಳಕೆ ಮತ್ತು ನವೀಕರಿಸಬಹುದಾದ ಶಕ್ತಿ ಮೂಲಗಳ ಅಳವಡಿಕೆಗೆ ಅವಕಾಶವಿದ್ದಲ್ಲಿ ಸ್ವಾಗತಾರ್ಹ.
- ಅಂಗಾಂಶ ಕೃಷಿ ಪ್ರಯೋಗಾಲಯ, ಸೂಕ್ಷ್ಮ ಜೀವಿ, ಜೈವಿಕ ಗುಣಮಟ್ಟ ನಿಯಂತ್ರಣ, ಸಸ್ಯ ನೈರ್ಮಲೀಕರಣ ಪ್ರಯೋಗಾಲಯಗಳು, **ವಿಶ್ಲೇಷಣೆ ಪ್ರಯೋಗಾಲಯಗಳು** (ಮಣ್ಣು, ನೀರು, ಸಸ್ಯ ಅಂಗಾಂಶ, ಸಾವಯವ ಪರಿಕರಗಳು, ಔಷಧಿ ಮತ್ತು ಸುಗಂಧ ಸಸ್ಯಗಳ ರಸಾಯನಿಕಗಳ ವಿಶ್ಲೇಷಣೆ, ಭಾರಿ ಲೋಹಗಳ ವಿಶ್ಲೇಷಣೆ, ಕೀಟನಾಶಕ ಉಳಿಕೆ

ವಿಶ್ಲೇಷಣೆ), ಜೈವಿಕ ಸಂಗ್ರಹಾಲಯ, ತರಬೇತಿ ಸಭಾಂಗಣ, ಮಳೆ ನೀರು ಕೊಯ್ಲು ಘಟಕಗಳು, ಸಾವಯವ ಉತ್ಪಾದನಾ ಘಟಕಗಳು ಇತ್ಯಾದಿ ಗಳಿಗೆ ವಿನ್ಯಾಸ ರೂಪಿಸುವುದು.

- ವಿವಿಧ ಪರ್ಯಾಯ ರೀತಿಯ ವೈಚಾರಿಕ ವಿನ್ಯಾಸಗಳನ್ನು ಜೈವಿಕ ಕೇಂದ್ರ, ಬೆಂಗಳೂರು ರವರೊಂದಿಗೆ ಪರಾಮರ್ಶಿಸಿ ರೂಪಿಸುವುದು ಮತ್ತು ಅಂತಿಮಗೊಳಿಸುವುದು.
- ಅತ್ಯಾಧುನಿಕ ತಂತ್ರಜ್ಞಾನ ವಲಯದಿಂದ ತಾಂತ್ರಿಕ ಮಾಹಿತಿಯನ್ನು ಜೈವಿಕ ಕೇಂದ್ರ, ಬೆಂಗಳೂರು ರವರೊಂದಿಗೆ ಪರಾಮರ್ಶಿಸಿ ಒದಗಿಸುವುದು.
- ಕಾಮಗಾರಿ ಕಾರ್ಯಗಳಿಗೆ ಸಂಬಂಧಪಟ್ಟಂತೆ, ಕಡಿಮೆ ಕಾಂಕ್ರೀಟ್ ಬಳಕೆಯ, ಸಿದ್ಧಪಡಿಸಿದ ರಚನೆಗಳು ಮತ್ತು ಈ ರೀತಿಯ ಅತ್ಯಾಧುನಿಕ ತಂತ್ರಜ್ಞಾನದ ರಚನೆಗಳನ್ನು ಬಳಸುವುದು (Latest free fabricated structures, corrugated sheets with least concrete).
- ಕಾಮಗಾರಿ, ವಿದ್ಯುತ್, ವಿದ್ಯುನ್ಮಾನ ಕಾರ್ಯಗಳಾದಂತಹ ಟ್ರಾನ್ಸ್‌ಫಾರ್ಮರ್, ಡಿ.ಜಿ.ಉಪಕರಣಗಳು, ಪ್ಲಂಬಿಂಗ್ ಕಾರ್ಯ ಹಾಗೂ ಮತ್ತಿತರೆ ಉಪಕರಣಗಳ ಅಳವಡಿಕೆ ಕುರಿತು ಯೋಜನೆ ಮತ್ತು ನಕಾಶೆ ಸಿದ್ಧಪಡಿಸುವುದು.
- ಅನುಷ್ಠಾನದ ಕ್ರಮಾನುಗತಿ ಸಿದ್ಧಪಡಿಸುವುದು.
- ಜೈವಿಕ ಕೇಂದ್ರ, ಬೆಂಗಳೂರು ರವರೊಂದಿಗೆ ಪರಾಮರ್ಶಿಸಿ, ವಿವರವಾದ ಅಂದಾಜು ಪಟ್ಟಿ ಮತ್ತು ಟೆಂಡರ್ ದಾಖಲಾತಿಗಳನ್ನು ಸಿದ್ಧಪಡಿಸುವುದು.
- ಜೈವಿಕ ಕೇಂದ್ರ, ಬೆಂಗಳೂರು ರವರೊಂದಿಗೆ ಪರಾಮರ್ಶಿಸಿ, ವಿವಿಧ ಸಾಮಗ್ರಿಗಳ ಪ್ರಮಾಣವನ್ನು ಗೊತ್ತುಪಡಿಸಿ ಟೆಂಡರ್ ಆಹ್ವಾನಿಸಲು ಕಾರ್ಯಕ್ರಮ ರೂಪಿಸುವುದು.
- ಯೋಜನೆಯ ವಿವಿಧ ಘಟಕಗಳ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ, ಸಾಮಗ್ರಿಗಳ ಖರೀದಿ ಹಾಗೂ ಅನುಷ್ಠಾನ ಕಾರ್ಯಕ್ಕಾಗಿ ಸಂಸ್ಥೆಗಳು/ ಗುತ್ತಿಗೆದಾರರನ್ನು ನಿಯಮಾನುಸಾರ ಅಂತಿಮಗೊಳಿಸಲು ಜೈವಿಕ ಕೇಂದ್ರಕ್ಕೆ ಎಲ್ಲಾ ರೀತಿಯ ಸಹಕಾರ ನೀಡುವುದು.
- ವಿವಿಧ ಕಾಮಗಾರಿಗಳು, ವಿದ್ಯುತ್ ಮತ್ತು ವಿದ್ಯುನ್ಮಾನ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ಯಂತ್ರೋಪಕರಣಗಳು, ಬಿಡಿ ಭಾಗಗಳು, ಮತ್ತಿತರೆ ಸಾಮಗ್ರಿಗಳ ಪೂರೈಕೆ ಹಾಗೂ ಸೂಕ್ತ ರೀತಿಯ ಅಳವಡಿಕೆಗೆ, ಸರಬರಾಜುದಾರರು ಹಾಗೂ ಗುತ್ತಿಗೆದಾರರನ್ನು ನಿಯಮಾನುಸಾರ ಅಂತಿಮಗೊಳಿಸಲು ಜೈವಿಕ ಕೇಂದ್ರಕ್ಕೆ ಎಲ್ಲಾ ರೀತಿಯ ಸಹಕಾರ ನೀಡುವುದು.
- ಯೋಜನೆಯ ವಿವಿಧ ಹಂತಗಳ ಅನುಷ್ಠಾನ ಸಂದರ್ಭದಲ್ಲಿ, ಅವಶ್ಯವಿದ್ದಾಗ ಎಲ್ಲಾ ಸ್ಥಳಗಳಿಗೆ ಕಾಲ ಕಾಲಕ್ಕೆ ಭೇಟಿ ನೀಡಿ, ಪರಿವೀಕ್ಷಿಸಿ, ತೃಪ್ತಿದಾಯಕ ರೀತಿಯಲ್ಲಿ ಸಲಹೆ ಮತ್ತು ಸೇವೆಯನ್ನು ಒದಗಿಸಿ, ಯೋಜನೆಯನ್ನು ಯಶಸ್ವಿ ರೀತಿಯಲ್ಲಿ ಪೂರ್ಣಗೊಳಿಸಿ, ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸುವುದು.
- ವಿವಿಧ ಸಾಮಗ್ರಿಗಳು, ಪರಿಕರಗಳು, ಯಂತ್ರೋಪಕರಣಗಳು, ಬಿಡಿ ಭಾಗಗಳು, ಇವುಗಳ ಜೋಡಣೆ/ಅಳವಡಿಕೆ ಇತ್ಯಾದಿ ಕಾರ್ಯಗಳ ಪ್ರಮಾಣ, ಗುಣಮಟ್ಟ ಮತ್ತು ಸೇವೆಗಳನ್ನು ದೃಢೀಕರಿಸುವುದು.
- ಯೋಜನೆಯಲ್ಲಿ ಬಳಸಲಾಗುವ ಎಲ್ಲಾ ಸಾಮಗ್ರಿಗಳ ಪ್ರಮಾಣ, ಗುಣಮಟ್ಟ, ಅಳವಡಿಕಾ ವಿಧಾನ, ಪರ್ಯಾಯ ವ್ಯವಸ್ಥೆ ಮತ್ತು ಇವೆಲ್ಲವುಗಳ ಮೂಲಗಳು ಇತ್ಯಾದಿಗಳನ್ನು ಸ್ಪಷ್ಟವಾಗಿ ಮುಂಚೆಯೇ ನಿಗಧಿಪಡಿಸುವುದು.

**ಸೇವಾ /ಸಲಹಾ ಅಗತ್ಯತೆಗಳು :**

- ಯೋಜನೆಯನ್ನು ಟರ್ನ್ ಕಿ ಆಧಾರದ ಮೇಲೆ ಅನುಷ್ಠಾನಗೊಳಿಸಬೇಕಿರುತ್ತದೆ.
- ಸಲಹಾ/ ಸೇವಾ ತಂಡವು ಅರ್ಹತೆಯುಳ್ಳ ಪರಿಣಿತ ಇಂಜಿನಿಯರ್‌ಗಳನ್ನು ಕಾಮಗಾರಿ, ವಿದ್ಯುತ್ ಮತ್ತು ವಿದ್ಯುನ್ಮಾನ ಕ್ಷೇತ್ರಗಳಲ್ಲಿ ಹೊಂದಿರಬೇಕು. ತಂಡದ ಮುಖ್ಯಸ್ಥರು ಜೈವಿಕ ಇಂಜಿನಿಯರಿಂಗ್ ಅಥವಾ ಜೈವಿಕ ತಂತ್ರಜ್ಞಾನ ಅಥವಾ ಜೈವಿಕ ವಿಜ್ಞಾನ ಅಥವಾ ಕೃಷಿ ಇಂಜಿನಿಯರಿಂಗ್ ಕ್ಷೇತ್ರಗಳಲ್ಲಿ ವಿದ್ಯಾಭ್ಯಾಸ ಅರ್ಹತೆ ಮತ್ತು ಪರಿಣಿತಿ ಪಡೆದಿರಬೇಕು. ಹಾಗೂ ಈ ಎಲ್ಲಾ ಪರಿಣಿತರಿಗೆ Management ವಿಧ್ಯಾರ್ಹತೆ ಇರಬೇಕು.
- ತಂಡವು ಜೈವಿಕ ಕೇಂದ್ರ ಅಥವಾ ಸಂಬಂಧಪಟ್ಟ ಜ್ಞಾನ ಕೇಂದ್ರಗಳ ಅಭಿವೃದ್ಧಿ ಕ್ಷೇತ್ರದಲ್ಲಿ ಐದು ವರ್ಷ ಕರ್ತವ್ಯ ನಿರ್ವಹಿಸಿದ ಅನುಭವ ಹೊಂದಿರಬೇಕು.
- ತಂಡವು ರೂ.500.00 ಲಕ್ಷಕ್ಕಿಂತ ಕಡಿಮೆ ಯೋಜನಾ ವೆಚ್ಚವಿರದ ಯೋಜನೆಗಳಲ್ಲಿ, ಗುತ್ತಿಗೆ ಪಡೆದು (The single contract value of the project should not be less than Rs.500.00 lakhs), ಟರ್ನ್ ಕಿ ಆಧಾರದ ಮೇಲೆ ಜೈವಿಕ ಕೇಂದ್ರಗಳು ಅಥವಾ ಸಂಬಂಧಪಟ್ಟ ಜ್ಞಾನ ಕೇಂದ್ರಗಳನ್ನು ಯಶಸ್ವಿಯಾಗಿ ಸ್ಥಾಪಿಸಿದ/ ಅಭಿವೃದ್ಧಿ ಪಡಿಸಿದ ಅನುಭವ ಹೊಂದಿರಬೇಕು.

- ತಂಡವು ಅವಶ್ಯವಿದ್ದಾಗ, ವಿವಿದೆಡೆಗಳಲ್ಲಿನ ಕಾರ್ಯಕ್ಷೇತ್ರಗಳು ಮತ್ತು ಮತ್ತಿತರೆ ಅಗತ್ಯ ಏಜೆನ್ಸಿ / ಸ್ಥಳಗಳಿಗೆ ಭೇಟಿ ನೀಡಿ ಪರಾಮರ್ಶಿಸಲು ಸಿದ್ಧರಿರಬೇಕು.
- ಸಲಹಾ ತಂಡವು ಯೋಜನೆಗೆ ಸಂಬಂಧಪಟ್ಟಂತೆ, ಜೈವಿಕ ಕೇಂದ್ರ, ಬೆಂಗಳೂರು ರವರ ಅನುಮತಿ ಇಲ್ಲದೇ ಬೇರಾರೊಂದಿಗೂ ಯಾವುದೇ ರೀತಿಯ ಆಶ್ವಾಸನೆ / ವಚನ ಬದ್ಧತೆ ಮಾಡುವಂತಿಲ್ಲ.
- ಸಲಹಾ ತಂಡವು ಕ್ರಮಬದ್ಧವಾಗಿ ಪರೀಕ್ಷಾ / ಪರಿವೀಕ್ಷಣಾ ವಿಧಾನಗಳನ್ನು ಅನುಸರಿಸಿ ಸಲಹೆಯನ್ನು ನೀಡುವುದು. ಅಗತ್ಯವಿದ್ದಲ್ಲಿ ಸ್ವತಂತ್ರ ಏಜೆನ್ಸಿಯ ಸಹಾಯ ಪಡೆಯಬಹುದಾಗಿರುತ್ತದೆ.
- ತಂತ್ರಜ್ಞಾನವು ಈಗಾಗಲೇ ಖಾತರಿಪಡಿಸಿದ ಮೂಲ / ವಿಧಾನಗಳಿಂದಾಗಿರಬೇಕು.
- ತಂಡವು ಅಳವಡಿಸುವ ತಂತ್ರಜ್ಞಾನದ ಮೂಲ, ಸ್ವಭಾವ ಮತ್ತು ವಿಧಾನ ಬಗ್ಗೆ ನಿಖರವಾದ ನಿರ್ಧಿಷ್ಟತೆ ಹೊಂದಿರಬೇಕು.
- ತಂತ್ರಜ್ಞಾನವು ಸಾಧ್ಯವಾದಷ್ಟುಮಟ್ಟಿಗೆ ಸ್ಥಳೀಯವಾಗಿ ಲಭ್ಯವಿರುವ ಸಾಮಗ್ರಿಗಳನ್ನು ಅಳವಡಿಸಿಕೊಂಡು, ಸ್ಥಳೀಯ ಪರಿಸ್ಥಿತಿಗೆ ಹೊಂದಿಕೊಳ್ಳುವ ಅನುರೂಪದ್ದಾಗಿರಬೇಕು.
- ಸಲಹಾ ತಂಡವು ಯೋಜನೆಯ ಕಾಮಗಾರಿ ಕಾರ್ಯ, ಯಂತ್ರೋಪಕರಣಗಳ ಪೂರೈಕೆ, ಅವುಗಳ ಅಳವಡಿಕೆ ಮತ್ತು ಕಾರ್ಯಾರಂಭ ಇತ್ಯಾದಿಗಳ ಸಮಂಜಸ ಕ್ರಮಾನುಗತಿಯನ್ನು PERT ಮತ್ತು CPM ನಕಾಶೆಗಳ ಮುಖೇನ ಸಿದ್ದಪಡಿಸಬೇಕು. ಮತ್ತು ಈ ಕ್ರಮಾನುಗತಿಯಲ್ಲಿ ನಿಗಧಿಪಡಿಸಿದ ಕಾಲ ಮಿತಿ ಪ್ರಕಾರವೇ ಯೋಜನೆಯು ಕಾರ್ಯಾನುಷ್ಠಾನಗೊಂಡು, ಸಂಪೂರ್ಣ–ಸುಸಜ್ಜಿತ ಜೈವಿಕ ಕೇಂದ್ರ ಕಾರ್ಯಾರಂಭ ಮಾಡುವಂತೆ ಅಗತ್ಯಕ್ರಮ ವಹಿಸುವುದು.
- ಸಲಹಾ ತಂಡವು ಯೋಜನೆಯ ಅನುಷ್ಠಾನದ ಪ್ರತಿ ಹಂತದಲ್ಲೂ, ಅನುಷ್ಠಾನ ವಿಧಿ – ವಿಧಾನಗಳನ್ನು ತೀವ್ರಗತಿಯಲ್ಲಿ ಪರಾಮರ್ಶಿಸತಕ್ಕದ್ದು.
- ಅನಿವಾರ್ಯವಾಗಿ ಯೋಜನೆಯ ಯಾವುದೇ ಘಟಕ ಅನುಷ್ಠಾನ ಕಾರ್ಯ ವಿಳಂಭವಾದಲ್ಲಿ, ಅದನ್ನು ತ್ವರಿತಗತಿಯಲ್ಲಿ ಗುಣಮಟ್ಟಕ್ಕೆ ಯಾವುದೇ ರೀತಿಯ ಕುಂದುಬಾರದಂತೆ, ನಿಗಧಿತ ಗಡುವಿನೊಳಗೆ ಚಾಚೂ ತಪ್ಪದೇ ಪೂರ್ಣಗೊಳಿಸಲು ವಿಶೇಷ ಪ್ರಯತ್ನವಹಿಸುವಂತಿರಬೇಕು.

**ಷರತ್ತು ಮತ್ತು ನಿಬಂಧನೆಗಳು:**

- ಟೆಂಡರುದಾರರು ತಮ್ಮ ಸಂಸ್ಥೆಯ ಬಗೆಗಿನ ವಿವರಗಳನ್ನೊಳಗೊಂಡ (ನೊಂದಾವಣೆ ವಿವರ, ಪ್ರಮುಖ ತಂತ್ರಜ್ಞರ ವಿವರ, ಕ್ಷೇತ್ರದಲ್ಲಿನ ಅನುಭವ, ಇಲ್ಲಿಯವರೆಗೆ ಅದರಲ್ಲೂ ವಿಶೇಷವಾಗಿ ಕಳೆದ ಐದು ವರ್ಷಗಳಲ್ಲಿ ಅನುಷ್ಠಾನಗೊಳಿಸಿದ ಯೋಜನೆಗಳ ವಿವರ ಇತ್ಯಾದಿ) ಟಿಪ್ಪಣಿಯನ್ನು ಲಗತ್ತಿಸುವುದು.
- ಟೆಂಡರ್‌ದಾರರು ತಮ್ಮ ಸಂಸ್ಥೆಯ ಅರ್ಹತೆ ಮತ್ತು ಅನುಭವಗಳನ್ನು ಮೂಲ ಅಥವಾ ದೃಢೀಕೃತ ದಾಖಲೆಗಳಿಂದಲೇ ದೃಢಪಡಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಬಿಡ್ಡುಗಳನ್ನು ಅಪೂರ್ಣವೆಂದು ಪರಿಗಣಿಸಿ, ತಿರಸ್ಕರಿಸಲಾಗುವುದು. ದಾಖಲಾತಿಗಳ ಸತ್ಯಾಸತ್ಯತೆ, ಇತ್ಯಾದಿ ವಿವರಗಳನ್ನು, ಮೂಲ ಅಥವಾ ದೃಢೀಕೃತ ದಾಖಲಾತಿಗಳನ್ನು ಹಾಜರುಪಡಿಸದ ಹೊರತು, ಇನ್ನಾವುದೇ ರೀತಿಯ ಪರೋಕ್ಷ / ಪರ್ಯಾಯ / ನಿರೀಕ್ಷಿತ / ಊಹಾತ್ಮಕ ಮಾರ್ಗಗಳನ್ನು ಅನುಸರಿಸಿ ದೃಢೀಕರಿಸಿಕೊಳ್ಳುವ ಪ್ರಮೇಯ ಇರುವುದಿಲ್ಲ. ಈ ವಿಚಾರದಲ್ಲಿ ತೋಟಗಾರಿಕೆ ಜಂಟಿ ನಿರ್ದೇಶಕರು, ಜೈವಿಕ ಕೇಂದ್ರ ರವರ ತೀರ್ಮಾನ ಅಂತಿಮದ್ದಾಗಿರುತ್ತದೆ.
- ಅರ್ಜಿದಾರರು ಟೆಂಡರ್‌ದಾಖಲಾತಿಗಳೊಂದಿಗೆ, **ತೋಟಗಾರಿಕೆ ಉಪ ನಿರ್ದೇಶಕರು (ಅಂಗಾಂಶ ಕೃಷಿ), ಜೈವಿಕ ಕೇಂದ್ರ, ಹುಳಿಮಾವು, ಬೆಂಗಳೂರು** ರವರ ಹೆಸರಿನಲ್ಲಿ, ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ರೂ.1,00,000/- ಗಳ ಇ.ಎಂ.ಡಿ. ಮೊತ್ತದ ಡಿ.ಡಿ.ಯನ್ನು ಖಡ್ಡಾಯವಾಗಿ ಲಗತ್ತಿಸತಕ್ಕದ್ದು. ಇದಕ್ಕೆ ಯಾವುದೇ ರೀತಿಯ ಬಡ್ಡಿ ನೀಡಲಾಗುವುದಿಲ್ಲ.
- ಟೆಂಡರ್‌ನಲ್ಲಿ ಆಯ್ಕೆಯಾಗದ ಬಿಡ್ಡುದಾರರ ಠೇವಣಿ ಮೊತ್ತವನ್ನು, ಟೆಂಡರ್ ದಿನಾಂಕದಿಂದ ಒಂದು ತಿಂಗಳೊಳಗೆ ಹಿಂದಿರುಗಿಸಲಾಗುವುದು. ಆಯ್ಕೆಯಾದ ಬಿಡ್ಡುದಾರರ ಠೇವಣಿ ಮೊತ್ತವನ್ನು, ಒಪ್ಪಂದದ ಪ್ರಕಾರ, ಯೋಜನೆಯು ಸಂಪೂರ್ಣವಾಗಿ ಅನುಷ್ಠಾನಗೊಂಡು, ತೋಟಗಾರಿಕೆ ಇಲಾಖೆಗೆ ಹಸ್ತಾಂತರವಾದ ನಂತರವೇ ಹಿಂದಿರುಗಿಸಲಾಗುವುದು. ಈ ರೀತಿ ಉಳಿಸಿಕೊಂಡ ಠೇವಣಿಗೆ ಯಾವುದೇ ರೀತಿಯ ಬಡ್ಡಿ ನೀಡಲಾಗುವುದಿಲ್ಲ.
- ಟೆಂಡರ್‌ದಾರರು ತಾಂತ್ರಿಕ ಮತ್ತು ಹಣಕಾಸು ಬಿಡ್ಡನ್ನು, ಪ್ರತ್ಯೇಕವಾಗಿ ಎರಡು ಮೊಹರಾದ ಲಕೋಟೆಗಳಲ್ಲಿ, **ತಾಂತ್ರಿಕ ಬಿಡ್ಡು** ಹಾಗೂ **ಹಣಕಾಸು ಬಿಡ್ಡು** ಎಂದು ಪ್ರತ್ಯೇಕವಾಗಿ ನಮೂದಿಸಿ, ಈ ಎರಡೂ ಲಕೋಟೆಗಳನ್ನು ಇ.ಎಂ.ಡಿ, ಡಿ.ಡಿ ಯೊಂದಿಗೆ ಮತ್ತೊಂದು ದೊಡ್ಡ ಲಕೋಟೆಯಲ್ಲಿರಿಸಿ, ತೋಟಗಾರಿಕೆ ಜಂಟಿ ನಿರ್ದೇಶಕರು, ಜೈವಿಕ ಕೇಂದ್ರ, ಹುಳಿಮಾವು, ಬೆಂಗಳೂರು ರವರ ವಿಳಾಸ ನಮೂದಿಸಿ, ಜೈವಿಕ ಕೇಂದ್ರ, ಹುಳಿಮಾವು, ಬೆಂಗಳೂರು ಕಛೇರಿಯಲ್ಲಿರಿಸಿರುವ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು.

- ಬಿಡ್ಡುದಾರರು ಹಣಕಾಸು ಬಿಡ್ಡಿನಲ್ಲಿ, ಪಾವತಿಯ ವಿಧಾನ, ಕ್ರಮಾನುಗತಿ, ಪಾವತಿಯ ವೇಳಾಪಟ್ಟಿ, ವಿವಿಧ ಹಂತಗಳ ಕಾರ್ಯಾನುಷ್ಠಾನಕ್ಕನುಗುಣವಾಗಿ ಕಂತುಗಳಲ್ಲಿ ಹಣ ಪಾವತಿ ಇತ್ಯಾದಿ ಬಗ್ಗೆ, ಸ್ಪಷ್ಟವಾಗಿ ನಮೂದಿಸತಕ್ಕದ್ದು.
- ಸಲಹಾ / ಸೇವಾ ಕರ್ತವ್ಯಕ್ಕೆ ಸಂಬಂಧಪಟ್ಟಂತೆ, ಎಲ್ಲಾ ಖರ್ಚು–ವೆಚ್ಚ (ಪ್ರಯಾಣ ವೆಚ್ಚ, ದಿನಭತ್ಯೆ, ಯೋಜನಾ ಮತ್ತು ವಿನ್ಯಾಸ ತಯಾರಿ ವೆಚ್ಚ, ಇತ್ಯಾದಿ) ಗಳನ್ನು ಸಂಬಂಧಪಟ್ಟ ಟೆಂಡರುದಾರರೇ ನಿರ್ವಹಿಸತಕ್ಕದ್ದು. ಈ ವಿಚಾರದಲ್ಲಿ ಯಾವುದೇ ತರಹದ ಹಣ ಪಾವತಿಯನ್ನು ಜೈವಿಕ ಕೇಂದ್ರ / ತೋಟಗಾರಿಕೆ ಇಲಾಖೆ / ಸರ್ಕಾರದ ವತಿಯಿಂದ ಮಾಡಲು ಅವಕಾಶವಿರುವುದಿಲ್ಲ.
- ಜೈವಿಕ ಕೇಂದ್ರವು ಅತೀ ಕಡಿಮೆ ದರ ನಮೂದಿಸಿದ ಬಿಡ್ಡನ್ನೇ ಪರಿಗಣಿಸಬೇಕೆನ್ನುವುದು ಕಡ್ಡಾಯವಿರುವುದಿಲ್ಲ. ಟೆಂಡರ್ ಆಯ್ಕೆಯು ಬಿಡ್ಡುದಾರರ **ತಾಂತ್ರಿಕ ಬಿಡ್ಡಿನಲ್ಲಿನ ಗುಣಮಟ್ಟ ಖರ್ಚು–ವೆಚ್ಚ ಆಧಾರಿತ ಬಿಡ್ಡು ಹಾಗೂ ಹಣಕಾಸು ಬಿಡ್ಡು,** ಇವೆರಡರುಗಳ ಸಾಂಬಂದಿಕ ಪ್ರಾಮುಖ್ಯತೆ ಮತ್ತು ಗುರುತ್ವತೆ (weightage of suitability of quality cost based system and the financial bid) ಗಳನ್ನಾಧರಿಸಿ, ನಿರ್ಧರಿಸಲ್ಪಡುವುದು. ಆದರೆ ಬಿಡ್ಡುದಾರರಲ್ಲಿ ಈ ವಿಚಾರವಾಗಿ ಹೆಚ್ಚಿನ ವ್ಯತ್ಯಾಸಗಳಿಲ್ಲದಿದ್ದಲ್ಲಿ, ಅತೀ ಕಡಿಮೆ ದರ ನಮೂದಿಸಿರುವ ಬಿಡ್ಡುದಾರರನ್ನು ಪರಿಗಣಿಸಬಹುದಾಗಿರುತ್ತದೆ. ಈ ವಿಷಯದಲ್ಲಿ ಕೆಳಗಿನ ಸಹಿದಾರರ ನಿರ್ಧಾರ ಅಂತಿಮವಾಗಿರುತ್ತದೆ.
- ಟೆಂಡರ್‌ದಾರರು ಎಲ್ಲಾ ನಾಲ್ಕು ಕ್ಷೇತ್ರಗಳಲ್ಲೂ ಸಲಹಾ ಸೇವೆಗೆ ಸಿದ್ದರಿರುವ ಬಗ್ಗೆ ಅಥವಾ ಇಲ್ಲದಿರುವ ಬಗ್ಗೆ ಸ್ಪಷ್ಟಪಡಿಸಬೇಕು. ಬಿಡ್ಡುದಾರರ ಕೆಲಸದ ಗುಣಮಟ್ಟ ಮತ್ತಿತರೆ ನಿರೀಕ್ಷಿತ ಸೂಕ್ತತೆಗಳನ್ನಾಧರಿಸಿ, ಎಲ್ಲಾ ನಾಲ್ಕು ಕ್ಷೇತ್ರಗಳ ಸಲಹಾ ಸೇವೆಯ ಟೆಂಡರ್ ಕಾರ್ಯಾದೇಶವನ್ನು ಒಂದೇ ಸಂಸ್ಥೆಗೆ ಅಥವಾ ಇವುಗಳನ್ನು ಭಾಗವಹಿಸಿದ ಒಂದಕ್ಕಿಂತ ಹೆಚ್ಚು ಬಿಡ್ಡುದಾರರಿಗೆ ಅರ್ಹತೆ / ಸೂಕ್ತತೆಯನ್ನಾಧರಿಸಿ ಹಂಚುವ ನಿರ್ಧಾರ ಈ ಕೆಳಗಿನ ಸಹಿದಾರರಿಗಿರುತ್ತದೆ.
- ಸಲಹಾ ಸೇವೆಯ ಟೆಂಡರ್ ಆಯ್ಕೆಯು, ಯೋಜನೆಯ ಅನುಷ್ಠಾನದ ಸಂಪೂರ್ಣ ನಾಲ್ಕು ವರ್ಷಗಳ ಅವಧಿಗೆ ನಿರ್ಧರಿಸಲ್ಪಟ್ಟಿದ್ದರೂ ಸಹ ಪ್ರತಿ ಹಂತದ / ವರ್ಷದ ಕಾರ್ಯಾನುಷ್ಠಾನದ ಸಲಹಾ ಸೇವೆಯ ಗುಣಮಟ್ಟವನ್ನಾಧರಿಸಿಯೇ, ತದನಂತರದ ಹಂತಗಳ/ ವರ್ಷದ ಕಾರ್ಯಾದೇಶ ನೀಡಲಾಗುವುದು.
- ತಾಂತ್ರಿಕ ಬಿಡ್ಡಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಮಾತ್ರ ಹಣಕಾಸು ಬಿಡ್ಡಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
- ಜೈವಿಕ ಕೇಂದ್ರವು ಟೆಂಡರ್‌ಗೆ ಸಂಬಂಧಪಟ್ಟಂತೆ, ಯಾವುದೇ ರೀತಿಯ ವಿಳಂಭಗಳಿಗೆ ಜವಾಬ್ದಾರಿಯಾಗಿರುವುದಿಲ್ಲ. ನಿಗಧಿಪಡಿಸಿದ ದಿನಾಂಕ ಮತ್ತು ಸಮಯದ ನಂತರ ಯಾವುದೇ ರೀತಿಯ ಬಿಡ್ಡುಗಳನ್ನು ಸ್ವೀಕರಿಸಲಾಗುವುದಿಲ್ಲ.

**ಗಮನಿಸಬೇಕಾದ ಅಂಶಗಳು:**

1. ಟೆಂಡರ್ ದಾಖಲಾತಿ ಪುಸ್ತಕ ಪಡೆಯಲು ಕೊನೆಯ ದಿನಾಂಕ ಮತ್ತು ಸಮಯ 15-01-2009, ಸಂಜೆ 5.30 ಗಂಟೆ
2. ಭರ್ತಿಮಾಡಿದ ಟೆಂಡರ್ ಪುಸ್ತಕ ಸಲ್ಲಿಸಲು ಕೊನೆಯ ದಿನಾಂಕ ಮತ್ತು ಸಮಯ 27-01-2009, ಮಧ್ಯಾಹ್ನ 1.30 ಗಂಟೆ
3. ಟೆಂಡರ್ ಪುಸ್ತಕದ ಬೆಲೆ ರೂ.500/- + 12.5% ಒಟ್ಟು ರೂ.562.50 ಗಳು
4. ಇ.ಎಂ.ಡಿ. ಮೊತ್ತ ರೂ.1,00,000/-
5. ತಾಂತ್ರಿಕ ಬಿಡ್ಡು ತೆರೆಯುವ ದಿನಾಂಕ ಮತ್ತು ಸಮಯ 27-01-2009 ಅಪರಾಹ್ನ 4.00 ಗಂಟೆ
6. ಹಣಕಾಸು ಬಿಡ್ಡು ತೆರೆಯುವ ದಿನಾಂಕ ಮತ್ತು ಸಮಯ 28-01-2009 ಅಪರಾಹ್ನ 3.00 ಗಂಟೆ
7. ಸಂಪೂರ್ಣ ಟೆಂಡರ್ ಪ್ರಕ್ರಿಯೆ ನಡೆಯುವ ಸ್ಥಳದ ವಿಳಾಸ: ಜೈವಿಕ ಕೇಂದ್ರ, ಅಂಚೆ ಪೆಟ್ಟಿಗೆ ಸಂಖ್ಯೆ:7648, ಹುಳಿಮಾವು, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560076, ದೂರವಾಣಿ: 080-26582784, 080-26582775, ಫ್ಯಾಕ್ಸ್ : 080-26584906.

**ಟೆಂಡರ್‌ನಲ್ಲಿ ಭಾಗವಹಿಸಲು ಸಲ್ಲಿಸಬೇಕಾದ ದಾಖಲಾತಿಗಳು :**

1. ತಾಂತ್ರಿಕ ಬಿಡ್ಡಿನ ವಿವರಗಳು (ಟೆಂಡರ್‌ದಾರರ ಸ್ವ–ನಮೂನೆಯಲ್ಲಿ)
2. ಸಲಹೆಗಾರರ ವಿವರಗಳನ್ನು ಪ್ರಸ್ತುತ ಪಡಿಸುವ ಪೂರ್ಣವಾಗಿ ಭರ್ತಿಮಾಡಲ್ಪಟ್ಟ (ಜೈವಿಕ ಕೇಂದ್ರದಿಂದ ಒದಗಿಸಿದ) ನಮೂನೆ
3. ಹಣಕಾಸು ಬಿಡ್ಡಿನ ವಿವರಗಳು (ಟೆಂಡರ್‌ದಾರರ ಸ್ವ–ನಮೂನೆಯಲ್ಲಿ)
4. ಹಣಕಾಸು ಬಿಡ್ಡಿನ (ಜೈವಿಕ ಕೇಂದ್ರದಿಂದ ಒದಗಿಸಿದ) ನಮೂನೆ
5. ಚೆಕ್ ಲಿಸ್ಟ್‌ನಲ್ಲಿರುವ ಎಲ್ಲಾ ಅಗತ್ಯ ಮಾಹಿತಿ
6. ಅರ್ಹತೆ ಮತ್ತು ಅನುಭವಗಳನ್ನು ಪ್ರಸ್ತುತಪಡಿಸುವ ಮೂಲ ಅಥವಾ ದೃಢೀಕೃತ ದಾಖಲಾತಿಗಳು

7. ಯೋಜನೆಯ ಸಲಹಾ ಸೇವೆಯ ಕ್ಷೇತ್ರೀಯ ಕಾರ್ಯವ್ಯಾಪ್ತಿ, ಸಲಹಾ / ಸೇವಾ ಅಗತ್ಯತೆಗಳು ಹಾಗೂ ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಒಪ್ಪಿ, ಸಹಿ ಮಾಡಿ ನೀಡಿದ ದಾಖಲಾತಿ
8. ಈ ಯೋಜನೆಗೆ ಸಂಬಂಧಪಟ್ಟಂತೆ ಟೆಂಡರ್‌ದಾರರು ಸಲ್ಲಿಸಲಿಚ್ಛಿಸುವ ಇತರೆ ದಾಖಲಾತಿಗಳು.

ತೋಟಗಾರಿಕೆ ನಿರ್ದೇಶಕರು

**BIOCENTRE**

**(Department of Horticulture, Government of Karnataka)**

**P.B.No.7648, Hulimavu, Bannerghatta Road, Bangalore-560076**

**Email: biocentre.hulimavu@gmail.com Website : www.horticulture.kar.nic.in**

**Tender Notification No. DH/JDH(Biotech)/TA/22/2007-08 Date:01st January 2009**

**NOTICE INVITING TENDER FOR ENGAGING CONSULTANTS FOR SETTING UP OF BIOCENTRES ON TURN KEY BASIS AT MYSORE, SHIMOGA, KOPPAL AND BIDAR OF KARNATAKA.**

Biocentres invites sealed tenders in prescribed format in duplicate from reputed, technically competent and experienced firms / group of individuals for taking up consultancy service on **'Turn Key'** basis, for setting up Biocentres at Mysore, Shimoga, Koppal and Bidar. The total approximate of project cost of establishing 4 Biocentres, over a period of 4 years, from 2008-09 to 2011-12, would be Rs.26.40 crores.

The terms and conditions, scope and nature of service and other details are contained in the tender documents, which can be had from the office of the Joint Director of Horticulture, Biocentre. The tender documents would be issued against the requisition from interested parties, from **05-01-2009 to 15-01-2009**, during officer hours (10.00 am to 5.00 pm), on payment of non transferable/ nonrefundable cost of tender documents of Rs.500/- + 12.5% tax (Rs.50/- extra for postal charges, if the documents are to be sent by registered post), by way of demand draft (DD) from any nationalized bank, drawn in favour of **Deputy Director of Horticulture (Tissue culture), Biocentre, Hulimavu,** payable at Bangalore.

Completed sealed tenders along with EMD of Rs.1,00,000/- (Rs. One Lakh only), by way of demand draft (DD) drawn in favour of **Deputy Director of Horticulture (Tissue culture), Biocentre, Hulimavu,** payable at Bangalore and addressed to Joint Director of Horticulture, Biocentre, Hulimavu, Bangalore, may be submitted latest by **27-01-2009,** before 1.30 pm. The technical bid would be opened on the same day at 4.00 pm in the presence of tenderers/ their authorized representatives present, in the office of Joint Director of Horticulture, Biocentre. The financial bid would be opened at 3.00 pm on **28-01-2008.** The undersigned reserves the right to reject any/ all tenders without assigning any reason.

Director of Horticulture

**BIOCENTRE**

**(Department of Horticulture, Government of Karnataka)**

**NOTICE INVITING TENDER FOR ENGAGING CONSULTANTS FOR SETTING UP OF BIOCENTRES ON TURN KEY BASIS AT MYSORE, SHIMOGA, KOPPAL AND BIDAR OF KARNATAKA.**

**NAME OF THE WORK:**

Planning, designing, doing ground work for tendering and getting it's proper execution, over all supervision, check measurement and quality maintenance on turn key basis of **"Establishment of Biocentres at Mysore, Shimoga, Koppal and Bidar of Karnataka".**

**ESTIMATED COST OF THE PROJECT:**

a. Total Project Cost: Rs. 2640.00 lakhs
b. Centrewise and Yearwise financial breakup

| Name of the Centre | Financial Year (Rs.in lakhs) | | | | Total |
|---|---|---|---|---|---|
| | 2008-09 | 2009-2010 | 2010-11 | 2011-12 | |
| Mysore | 175.00 | 125.00 | 200.00 | 160.00 | **660.00** |
| Shimoga | 175.00 | 125.00 | 200.00 | 160.00 | **660.00** |
| Koppal | 175.00 | 125.00 | 200.00 | 160.00 | **660.00** |
| Bidar | 175.00 | 125.00 | 200.00 | 160.00 | **660.00** |
| **TOTAL** | **700.00** | **500.00** | **800.00** | **640.00** | **2640.00** |

**TIME SCHEDULE OF EXECUTION:**

- Finalization of Plan and Design 28-02-2009
- Completion of tendering process and awarding tender 31-03-2009
- Completion of civil works 31-12-2009
- (a) Completion of polyhouses, shade houses, water harvesting structures, organic units structures 31-12-2010

  (b) Installation of partitions and electrical works 31-12-2010
- Purchase and installation of equipments/ machinery 31-12-2011
- Final finishing touchup works, commissioning and handing over to Department of Horticulture 31.03.2012

**SCOPE OF PROFESSIONAL SERVICES:**

- Comprehensive study of the identified site and its location.
- Eco-friendly and green technology like adoption of renewable energy modes, less energy consuming technology if any would be appreciated.
- Designing of tissue culture lab and hardening units, **analytical lab** (Soil, water, plant tissue, organic inputs, heavy metals, pesticide residues, organic ingredients in medicinal, aromatic and dye plants), micro biology lab, bio quality control lab, phytosanitary lab, bio museum, seminar hall, water harvesting structures, organic / biofertilizers productions units and the like.
- Providing various alternate conceptual designs in consultation with Biocentres showing different plans with perspective views.
- Preparation and finalization of design as per the requirements of Biocentre.
- Providing technical specifications in tune with the latest advances and requirement of Biocentre, Bangalore.
- With regard to civil works, execution with the latest free fabricated structures, corrugated sheets, with least concrete and any such advanced technology is required.
- Preparation of Civil, Electrical including HT installations and DG Sets, Plumbing, Plant & Machinery and tender drawings.
- Preparing sequence of implementation.
- Preparation of detailed estimation and necessary tender documents in consultation with Biocentre, Bangalore.
- Preparation of Bill of Quantities in consultation with Biocentres for inviting tenders.
- Assisting Biocentres in finalization of Contracting Firms for the various items of works to be undertaken.

- Assisting Biocentres in the finalization of vendors and suppliers for the various items of Civil, Electrical, Electronic, Plant & Machinery, Equipment, Tools and spares etc. required with in the tender.
- Periodic site visits during the execution and completion of all the services satisfactorily and successfully and finally handing over to Department of Horticulture.
- Bill checking and certification.
- To ensure that detailed specifications and quality of materials and alternate process and sources are invariably spelt out.

**REQUIREMENTS:**

- The project is on turn key basis. The prospective team of consultants shall be qualified civil structural engineer, a qualified electrical engineer, a qualified electronic engineer and the principal consultant shall be a qualified Biotechnology engineer/ Biotechnologist/Bio Scientist/ Agricultural engineer **with management background** who would manage the project execution from all points of view.
- The team must have at least about 5 (five) years of professional experience in the relevant field.
- The team should have track record of successfully completed projects on turnkey basis with regard to establishment of the above mentioned Biocentres/ related works, whose single contract value is not less than Rs.500.00 lakhs.
- The team shall be prepared to visit the site and other approving agencies as and when required and at different stations.
- Consultants shall not have free hand to commit anything pertaining to the project without the prior consultation and approval from Biocentre.
- Consultants will prescribe inspection/ testing clauses by an independent inspection if need be.
- The technology will be from proven process.
- It should be very specific about the exact nature and type of technology required.
- The technology should be correlated and adaptable to the locally conditions and locally available inputs.
- Consultants should draw a **PERT & CPM** chart in respect of Sequence of delivery of equipment, plant & machinery and other construction works indicated in the tender. This should synchronize with the time fixed for erection and commissioning of full-fledged Biocentre.
- The consultants should have a constant review after every important event or delays due to any reason whatsoever to determine the ultimate time schedule in the completion of the project.

**TERMS AND CONDITIONS:**

- Tenderers need to submit a note on the firm, giving details of registration, key professionals, relevant experience and abstract of works under taken so far with emphasis on the immediate last 5 years.
- Tenderer should submit adequate documentary proof of having fulfilled all the eligibility criteria. These documents should be either in original or attested copies. There shall be no back reference to confirm the credentials except for the purpose of verifying the attested copies of documents. Otherwise the offer shall be considered as incomplete and shall be summarily rejected.

- The offer should be accompanied by an EMD of Rs.1,00,000/- (Rupees one lakh only) in the form of a DD from any nationalized bank drawn in favour of Deputy Director of Horticulture (Tissue culture) Biocentre, Bangalore. This does not carry any interest.
- The EMD of the unsuccessful bidders would be returned within one month from the date of opening of price bids. The EMD of the successful bidder would be retained as security deposit and returned once the project is completed in all respects and handed over to Biocentre as per contractual obligations. The EMD so retained by Biocentre would not carry any interest.
- The offers should be submitted in two separate sealed covers super scribing the covers as **"TECHNICAL BID" & "PRICE BID"** respectively. These two envelops should be kept in a bigger cover along with the DD towards EMD and addressed to The Joint Director of Horticulture (Biocentre), Hulimavu, Bangalore should be dropped in the tender box placed in the office of Biocentre, Bangalore.
- The tenderers should clearly provide the details of mode, sequence and schedule of payment expected, installments and the like.
- All kinds of expenditure concerned with consultancy (TA, DA, Stationery, Software charges etc.), during the entire project implementation period, shall be borne by the consultants firm themselves. And their shall be no payment of any kind from Biocentre/ Department of Horticulture/ the Government.
- Biocentre is not bound to consider the lowest bidder only for the purpose. Awarding of the tender would be done on the basis of weightage of suitability of quality cost based system and the financial bid. However, lowest financial bid would be considered, if there is no significant difference among the bidders, with regard to **Suitability of Quality Cost based System.** The decision of the Joint Director of Horticulture, Biocentre, Bangalore is final and binding.
- Though tender awarding would be for all the 4 years of project implementing period, only successful completion of the works in time in each phase/ year of the project, makes the tenderer eligible for work allotment of subsequent phases, under the same terms and conditions.
- The tenderer should clearly mention his intension of taking up consultancy service work in all the 4 sites. The undersigned reserves the right to award tender of all the 4 sites to any one firm or distribute among the eligible firms, depending on the work quality / suitability expected of them.
- The successful and qualified bidders in the technical bid are only eligible for consideration for opening of their price bids.
- Biocentre is not responsible for any delay in the receipt of offers from any bidders due to any reason. No bids would be received after the scheduled date and time fixed.

**TO THE KIND ATTENTION OF TENDERERS:**

1. Last date and time for receiving tender booklet: 15-01-2009, 5.30 pm
2. Last date and time for submitting filled in tender documents: 27-01-2009, 1.30 pm
3. Price of the tender booklet: Rs.500/- +12.5% total Rs.562.60.
4. EMD amount: Rs.1,00,000/-
5. Date and time of opening technical bids: 27-01-2009, 4.00 pm
6. Date and time of opening financial bids: 28-01-2009, 3.00 pm
7. Address of the tender venue: P.B.No.7648, Hulimavu, Bannerghatta Road, Bangalore-560076, Tel: 080-26582784, 080-26582775, Fax: 080-26584906

**DOCUMENTS TO BE SUBMITTED:**

1. Technical bid details (from the bidders in their own format)
2. Format showing details of the consultants complete in all respects (in the format provided by the Biocentre)
3. Financial bid details (from the bidders in their own format)
4. Format for price bid (in the format provided by the Biocentre)
5. All the requirements as per checklist
6. Documentary proof (in original / attested copy) of having fulfilled eligibility criteria and experience.
7. Acceptance copy in writing of meeting the scope of professional service, the requirements, terms and conditions.
8. Any other related documents that the tenderer wishes to submit.

P.R. 23 Director of Horticulture

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ**

**ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ4/ಹರಾಜು/ಟೆಂಡರ್/ಸಿಆರ್–01/2008–09., ದಿನಾಂಕ: 03ನೇ ಜನವರಿ 2009.**

ಈ ವಿಭಾಗದ ಕಛೇರಿಯಲ್ಲಿ 2008–09 ನೇ ಸಾಲಿನಲ್ಲಿ ನೊಂದಾಯಿತ ಗುತ್ತಿಗೆದಾರರಿಂದ 2008–09ನೇ ಸಾಲಿಗೆ ಈ ಕೆಳಕಂಡ ಕಾಮಗಾರಿಗಳಿಗೆ ಮೊಹರಾದ ಟೆಂಡರನ್ನು ದಿನಾಂಕ: 17–12–2008 ರಂದು ಆಹ್ವಾನಿಸಲಾಗಿತ್ತು, ಆದರೆ ಸದರಿ ದಿನದಂದು ಭಾಗವಹಿಸಿದ ಗುತ್ತಿಗೆದಾರರ ದರದಲ್ಲಿ ಒಬ್ಬರು ಗುತ್ತಿಗೆದಾರರು ಮಾತ್ರ ದರ ನಮೂದಿಸಿ ಟೆಂಡರ್‌ನಲ್ಲಿ ಭಾಗವಹಿಸಿ ದಿನಾಂಕ: 19–01–2009 ರಂದು ಮರು ಟೆಂಡರ್ ಕರೆಯಲಾಗಿದೆ. ಕಾಮಗಾರಿ ನಿರ್ವಹಿಸಿ ಅನುಭವವುಳ್ಳವರಿಗೆ ಪ್ರಾಮುಖ್ಯತೆ ನೀಡಲಾಗುವುದು. ಟೆಂಡರ್ ಫಾರಂಗಳನ್ನು ರೂ. 200/– ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಿ ಈ ಕಛೇರಿಯಲ್ಲಿ ದಿನಾಂಕ: 15–01–2009 ರಿಂದ 19–01–2009 ರವರೆಗೆ ಬೆಳಗ್ಗೆ 10.00 ಘಂಟೆಯಿಂದ ಮಧ್ಯಾಹ್ನ 1.00 ಘಂಟೆಯವರೆಗೆ ನೀಡಲಾಗುವುದು. ಇಚ್ಛೆಯುಳ್ಳ ಗುತ್ತಿಗೆದಾರರು ಟೆಂಡರನ್ನು ಸಲ್ಲಿಸಬಹುದು. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿನಾಂಕ: 19–01–2009 ರಂದು ಮದ್ಯಾಹ್ನ 3:00 ಗಂಟೆ0ುವರೆಗೆ ಸ್ವೀಕರಿಸಲಾಗುವುದು. ಹೀಗೆ ಸ್ವೀಕರಿಸಿದ ಟೆಂಡರ್‌ಗಳನ್ನು ಅದೇ ದಿನ 3:30 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮಕ್ಷಮ ಈ ಕೆಳ ಸಹಿ ಮಾಡಿರುವ ಅಧಿಕಾರಿಗಳು ಅಥವಾ ಅವರಿಂದ ಪ್ರಾಧೀಕೃತಗೊಂಡ ಅಧಿಕಾರಿಗಳಿಂದ ತೆರೆದು ಓದಲಾಗುವುದು. ಒಂದು ವೇಳೆ ಮರು ಟೆಂಡರ್ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿತವಾದರೆ ಮರುದಿನ ಅದೇ ಸಮ0ುಕ್ಕೆ ತೆರೆ0ುಲಾಗುವುದು.

ಕಾಮಗಾರಿಗಳು ಈ ಕೆಳಕಂಡಂತಿರುತ್ತವೆ.

ಲೆಕ್ಕ ಶೀರ್ಷಿಕೆ 2406–02–110–0–47 ರಾಷ್ಟ್ರೀಯ ಉಧ್ಯಾನವನ ಅಭಿವೃದ್ಧಿ ಯೋಜನೆ (ಡಿ.ಎನ್.ಪಿ.ಎಸ್) (ಕೇಂದ್ರ) ಅಡಿಯಲ್ಲಿ ನಿರ್ವಹಿಸಬೇಕಾದ ಕಾಮಗಾರಿಗಳ ವಿವರ

| ಕ್ರ. ಸಂ | ಕಾಮಗಾರಿಗಳ ವಿವರ | ಕೆಲಸದ ಸ್ಥಳ ಮತ್ತು ಸಂಖ್ಯೆ | ಕಾಮಗಾರಿ0ು ಅಂದಾಜು ಮೊತ್ತ (ರೂಗಳಲ್ಲಿ) | ಕಾಮಗಾರಿ ಪೂರ್ಣಗೊಳಿಸ ಬೇಕಾದ ದಿನಾಂಕ | ಮುಂಗಡ ಠೇವಣಿ ಮೊಬಲಗು (ಇ.ಎಂ.ಡಿ) ರೂಗಳಲ್ಲಿ |
|---|---|---|---|---|---|
| 1. | ಸೌರಬೇಲಿ ನಿರ್ಮಾಣದ ಕಾಮಗಾರಿ | ಲೆಕ್ಕ ಶೀರ್ಷಿಕೆ: 2406–02–110–0–23– ಪ್ರಾಜೆಕ್ಟ್ ಎಲಿಫ್ಯಾಂಟ್ – 139 ಪ್ರಧಾನ ಕಾಮಗಾರಿಗಳು, ಮ.ಮ ಬೆಟ್ಟ ವನ್ಯಜೀವಿ ವಲಯದ ಇಂಡಿಗನಾಥ ಗ್ರಾಮ (1.5 ಕಿ.ಮೀ) | 3,75,000.00 | 28–02–2009 | 18,750.00 |

**ಷರತ್ತುಗಳು :–**

1. ಟೆಂಡರ್ ಫಾರಂ ಗಳನ್ನು ಪ್ರತಿ ಕಾಮಗಾರಿಗೆ ಪ್ರತ್ಯೇಕವಾಗಿ ರೂ.200.00 ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಿಕೊಂಡು ಈ ಕಛೇರಿಯಲ್ಲಿ ಬೆಳಿಗ್ಗೆ 10.00 ಘಂಟೆಯಿಂದ ಮಧ್ಯಾಹ್ನ 1.00 ಘಂಟೆಯವರೆಗೆ ನೀಡಲಾಗುವುದು.
2. ದಿನಾಂಕ: 19–01–2009 ರಂದು ಮೇಲೆ ತಿಳಿಸಿದಂತೆ ಟೆಂಡರ್‌ಫಾರಂ ಗಳನ್ನು 11:00 ಗಂಟೆಯಿಂದ ಮಧ್ಯಾಹ್ನ 1:30 ಗಂಟೆ0ುವರೆಗೆ ನೀಡಿ ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಅದೇ ದಿನ ಮಧ್ಯಾಹ್ನ 3:00 ಗಂಟೆಯವರೆಗೆ ಸ್ವೀಕರಿಸಿ ಅದೇ ದಿನ ಮಧ್ಯಾಹ್ನ 3:30 ಗಂಟೆಗೆ ಟೆಂಡರ್ ತೆರೆದು ಓದಲಾಗುವುದು, ಕಾಮಗಾರಿ ನಿರ್ವಹಿಸಲು ಸಮಯದ ಅಭಾವವಿರುವುದರಿಂದ ಈ ಅಲ್ಪಾವಧಿ ಮರು ಟೆಂಡರ್‌ನಲ್ಲಿ ಕೇವಲ ಒಂದು ಟೆಂಡರ್ ಸ್ವೀಕೃತವಾದರೆ ಸದರಿ ಟೆಂಡರ್‌ದಾರರಿಗೆ ಕಾಮಗಾರಿ ನಿರ್ವಹಿಸಲು ಒಪ್ಪಿಗೆ ನೀಡಲಾಗುವುದು. ಈ ಬಗ್ಗೆ ಮತ್ತೊಂದು ಮರುಟೆಂಡರ್ ಪ್ರಕಟಣೆ0ುನ್ನು ಹೊರಡಿಸುವುದಿಲ್ಲ.
3. ಕಾಮಗಾರಿಗೆ ನಿಗಧಿಪಡಿಸಿರುವ ಇ.ಎಮ್.ಡಿ (ಠೇವಣಿ ಹಣ) ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ 'ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ' ಇವರ ಹೆಸರಿನಲ್ಲಿ ಡಿ.ಡಿ ರೂಪದಲ್ಲಿ ಪಡೆದು ಟೆಂಡರ್ ಫಾರಂಜೊತೆಗೆ ಲಗತ್ತಿಸಬೇಕು. ಯಾವುದೇ ನಗದು / ಚೆಕ್ ಇತರೆ ಯಾವುದೇ ಹಣದ ರೂಪವನ್ನು ಲಗತ್ತಿಸುವಂತಿಲ್ಲ ಮತ್ತು ಸ್ವೀಕರಿಸುವುದೂ ಇಲ್ಲ.
4. ಮೇಲೆ ತಿಳಿಸಿರುವ ಕೆಲಸವು ಅ0ದಾಜಿನದ್ದಾಗಿದ್ದು ಯಾವುದೇ ಕಾರಣವಿಲ್ಲದೆ ಬದಲಾವಣೆಗೆ ಒಳಪಟ್ಟಿರುತ್ತದೆ ಮತ್ತು ಈ ಬಗ್ಗೆ ಅ0ತಿಮ ತೀರ್ಮಾನ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರದ್ದಾಗಿರುತ್ತದೆ.
5. ಅರಣ್ಯ ಗುತ್ತಿಗೆದಾರರು ಭರ್ತಿ ಮಾಡಿದ ಟೆಂಡರ್ ಫಾರಂ ಗಳನ್ನು ಪ್ರತಿ ವಲಯಕ್ಕೆ ಸಂಬಂಧಿಸಿದಂತೆ ಮತ್ತು ಪ್ರತಿ ಕಾಮಗಾರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಮೊಹರು ಮಾಡಿದ ಲಕೋಟೆಯಲ್ಲಿ ಪ್ರತ್ಯೇಕವಾದ ಇಎಂಡಿಯೊಂದಿಗೆ ಸಲ್ಲಿಸುವುದು.
6. ಸದರಿ ಕಾಮಗಾರಿಯು ಮಳೆ ಆಧಾರಿತ ಹಾಗೂ ಋತುಮಾನದ ಕೆಲಸಗಳಾಗಿರುವುದರಿಂದ. ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂಧರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
7. ಪ್ರತಿ ಟೆಂಡರ್ ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
8. ಮರು ಟೆ0ಡರ್‌ನಲ್ಲಿ ಯಶಸ್ವಿಯಾದ ಗುತ್ತಿಗೆದಾರರಿಗೆ ಕಾಮಗಾರಿಯು ಪೂರ್ಣಗೊಂಡ ನ0ತರ ಸಹಾ0ುಕ ಅರಣ್ಯ ಸಂರಕ್ಷಣಾಧಿಕಾರಿಗಳು ಕಾಮಗಾರಿಗಳನ್ನು ಪರಿಶೀಲಿಸಿ ಅಳತೆ ಮಾಪನ ಮಾಡಿಕೊಂಡ ನಂತರ ಹಾಗು ಹಣದ ಲಭ್ಯತೆಯ ಆಧಾರದ ಮೇಲೆ ಬಿಲ್ಲಿನ ಹಣವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುವುದು.
9. ಎಲ್ಲಾ ಕೆಲಸಗಳು ಆಗ್ಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ/ ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಸರ್ ಚಾರ್ಜ್, ವ್ಯಾಟ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗ್ಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
10. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಭಂಧನೆಗೆ ಒಳಪಟ್ಟಿರುತ್ತದೆ, ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಕರಾರು ಒಪ್ಪಂದ ಮಾಡಿಕೊಂಡ ಗುತ್ತಿಗೆದಾರರು ಆದೇಶ ಕೊಟ್ಟ ನಿಗದಿತ ಅವಧಿ0ುೊಳಗೆ ಕಾಮಗಾರಿ0ುನ್ನು ಮುಕ್ತಾ0ುಗೊಳಿಸತಕ್ಕದ್ದು, ತಪ್ಪಿದ್ದಲ್ಲಿ ಬಾಕಿ ಇರುವ ಕಾಮಗಾರಿಗಳ ಬಿಲ್ಲಿನ ಮೊತ್ತದಲ್ಲಿ ಶೇ 5 ರಷ್ಟು ಹಣವನ್ನು ದಂಡವಾಗಿ ಕಡಿತಗೊಳಿಸಲಾಗುವುದು.

12. ಟೆಂಡರ್ ಪ್ರಕಟಣೆ0ಯ 0ಯಾವುದೇ ನಿ0ಯಮಗಳನ್ನು ಉಲ್ಲಂಘಿಸಿದಲ್ಲಿ ಮರು ಟೆಂಡರು ಕರೆದು ಕೆಲಸ ಮಾಡಿಸುವ ಮತ್ತು 0ಯಾವುದೇ ಕಾರಣ ಕೊಡದೆ ಇಡೀ ಮರು ಟೆಂಡರನ್ನು ಮುಟ್ಟುಗೋಲು ಹಾಕಿಕೊಳ್ಳುವ ಅವಕಾಶವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರಿಗೆ ಕಾಯ್ದಿರಿಸಿಕೊಳ್ಳಲಾಗಿದೆ.
13. ನಿ0ಯಮದಂತೆ ಹಾಗೂ ತಾಂತ್ರಿಕವಾಗಿ ಕರ್ತವ್ಯ ನಿರ್ವಹಿಸಲು ವಿಫಲವಾದ ವಿಜೇತ ಟೆಂಡರುದಾರರ ಇ.ಎಮ್.ಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದರ ಜೊತೆಗೆ ಅವರ ಆರ್ಥಿಕ ಜವಾಬ್ದಾರಿ0ಯಲ್ಲಿ ಮರು ಟೆಂಡರು ಕರೆ0ಯಲಾಗುವುದು.
14. 0ಯಶಸ್ವಿ ಟೆಂಡರುದಾರರ ಆರ್ಥಿಕ ಜವಾಬ್ದಾರಿ0ಯಲ್ಲಿ ಟೆಂಡರನ್ನು ಕರೆದು ಕೆಲಸ ಮಾಡಿಸಿದ್ದಕ್ಕಾಗಿ ಇಲಾಖೆಗೆ ಆರ್ಥಿಕ ನಷ್ಟವುಂಟಾದರೆ ಅಂತಹ ನಷ್ಟವನ್ನು ಮೂಲ 0ಯಶಸ್ವಿ ಟೆಂಡರುದಾರರು ಕಟ್ಟಿ ಕೊಡಬೇಕಾಗುವುದು.
15. ಈ ಕ್ರಮದಿಂದ ಇಲಾಖೆಗೆ ಆಗಬಹುದಾದ ನಷ್ಟವನ್ನು ಮೂಲ 0ಯಶಸ್ವಿ ಟೆಂಡರುದಾರರು ಕಟ್ಟಿಕೊಡಲು ವಿಫಲವಾದರೆ, ಸದರಿ ಮೊತ್ತವನ್ನು ಬಾಕಿ ಕಂದಾ0ಯ ರೂಪದಲ್ಲಿ ವಸೂಲಿ ಮಾಡಲು ಕ್ರಮ ಕೈಗೊಳ್ಳಲಾಗುವುದು.
16. ಉಪ ಅರಣ್ಯ ಸಂರಕ್ಷಣಾಧಿಕಾರಿ0ಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ, ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ರವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
17. ಮರು ಟೆಂಡರನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿ ಮಾಡಿರುವವರಿಗೆ ಅಥವಾ ಮೇಲಾಧಿಕಾರಿಗಳಿಗೆ ಕಾಯ್ದಿರಿಸಲಾಗಿದೆ.
18. 0ಯಶಸ್ವಿ ಮರು ಟೆಂಡರುದಾರರು ಕಾಮಗಾರಿಗಳನ್ನು ಕಾಮಗಾರಿ ಸ್ಥಳಕ್ಕೆ ಸಂಬಂಧಿಸಿದ ಅರಣ್ಯಾಧಿಕಾರಿಗಳ ಸಲಹೆ ಹಾಗೂ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಅವರುಗಳ ನಿರ್ದೇಶನದಂತೆ ಕಾರ್ಯನಿರ್ವಹಿಸಬೇಕು.
19. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಕಷ್ಟ ತೊಂದರೆ ಇತ್ಯಾದಿಗಳಿಗೆ ಜವಾಬ್ದಾರಿಯಾಗುವುದಿಲ್ಲ.
20. ಗುತ್ತಿಗೆದಾರರು ನಿಗಧಿತ ಅವಧಿ0ಯಲ್ಲಿ ಕಾಮಗಾರಿ0ಯನ್ನು ಪೂರೈಸದಿದ್ದಲ್ಲಿ, ಅರ್ಧಕ್ಕೆ ನಿಲ್ಲಿಸಿದಲ್ಲಿ ಗುತ್ತಿಗೆದಾರರು ಪೂರೈಸಿದ ಕಾಮಗಾರಿ0ಯ ಹಣ ಪಾವತಿಗೆ ಗುತ್ತಿಗೆದಾರರು ಅರ್ಹರಿರುವುದಿಲ್ಲ ಹಾಗೂ ಕಾನೂನು ರೀತ್ಯ ಮುಂದಿನ ಕ್ರಮ ಕೈಗೊಳ್ಳಲಾಗುವುದು.
21. ಕೆಲಸದಲ್ಲಿ ಏನಾದರೂ ಬದಲಾವಣೆ ಅಥವಾ ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ 0ಯಾವುದೇ ರೀತಿ0ಯ ಪರಿಹಾರಕ್ಕೆ ಇಲಾಖೆ ಬದ್ದವಾಗಿರುವುದಿಲ್ಲ.
22. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜುಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ, ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಕಾಲಕಾಲಕ್ಕೆ ನೀಡುವ ಲಿಖಿತ/ ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು, ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ದರಾಗಿರಬೇಕಾಗುತ್ತದೆ.
23. ಯಶಸ್ವಿ ಮರು ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಮರು ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದ್ದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.
24. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಮರು ಟೆಂಡರುದಾರರು ಪ್ರಾರಂಭಿಸಬಾರದು.
25. ಗುತ್ತಿಗೆದಾರರು ವನ್ಯಜೀವಿ ಪ್ರದೇಶದಲ್ಲಿ ಕೆಲಸ ನಿರ್ವಹಿಸಬೇಕಾಗಿರುವುದರಿಂದ, ಈ ಪ್ರದೇಶವು ಸೂಕ್ಷ್ಮ ಮತ್ತು ಅಪಾಯ ಪ್ರದೇಶವಾಗಿದ್ದು, ಈ ಸಂಬಂಧ ಅವಶ್ಯ ಮುಂಜಾಗೃತಿ ಕ್ರಮ ಅನುಸರಿಸಬೇಕಾದ ಬಾದ್ಯತೆ ಗುತ್ತಿಗೆದಾರರ ಮೇಲಿರುತ್ತದೆ. ಯಾವುದೇ ಅನಾಹುತಗಳಿಗೆ ಇಲಾಖೆಯು ಹೊಣೆಯಾಗುವುದಿಲ್ಲ.

26. ಈಗಾಗಲೇ ಈ ಕಛೇರಿಯಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರಿಗೆ ಮಾತ್ರ ಟೆಂಡರ್ ಫಾರಂ ಗಳನ್ನು ನೀಡಲಾಗುವುದು.
27. ಮರು ಟೆಂಡರ್ ಪ್ರಕಟಣೆ ಹೊರಡಿಸಿದ ನಂತರ ಯಾವುದೇ ಗುತ್ತಿಗೆದಾರರ ನೊಂದಣಿಯನ್ನು ಮಾಡಲು ಅವಕಾಶವಿರುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಆಕ್ಷೇಪಣೆಗಳಿಗೆ ಅವಕಾಶವಿರುವುದಿಲ್ಲ.
**28.** ಹೆಚ್ಚಿನ ವಿವರಗಳು ಬೇಕಾದಲ್ಲಿ ಈ ಕಛೇರಿಯ ಕೆಲಸದ ದಿನಗಳಲ್ಲಿ ಪಡೆಯಬಹುದು.

**ಸೌರಬೇಲಿ ನಿರ್ಮಿಸುವ ಟೆಂಡರ್‌ಗೆ ಹೆಚ್ಚುವರಿ ಷರತ್ತುಗಳು**

1. ಅಳವಡಿಸಲಾಗುವ ಸೋಲಾರ್ ಶಕ್ತಿ ಬೇಲಿಯು ಕನಿಷ್ಠ ಮೂರು ವರ್ಷಗಳವರೆಗೆ ಸುಸ್ಥಿಯಲ್ಲಿ ಚಾಲ್ತಿ ಇದ್ದು ಮೂರು ವರ್ಷ ಗ್ಯಾರಂಟಿ ಅವಧಿ ಸಮಾಧಾನಕರವಾಗಿ ಮುಗಿದ ನಂತರ ಭದ್ರತಾ ಠೇವಣಿ ಹಿಂತಿರುಗಿಸುವುದು.
2. ಸೋಲಾರ್ ತಂತಿ ಬೇಲಿ ನಿರ್ಮಾಣ ಮಾಡಲು ಅಗತ್ಯವಿರುವ ಕಾಮಗಾರಿಗಳ ಪೂರೈಕೆ ಬಗ್ಗೆ ಹಾಗೂ ಬೇಲಿ ನಿರ್ಮಾಣ ಮಾಡಲು ತಾಂತ್ರಿಕ ಪರಿಣಿತಿ ಹೊಂದಿರುವ ಬಗ್ಗೆ ಅಧಿಕೃತ ದೃಡೀಕರಣ ಪತ್ರ ಲಗತ್ತಿಸಬೇಕು.
3. ಈ ಕಾಮಗಾರಿಯಲ್ಲಿ ಅಳವಡಿಸಲಾಗುವ ಸಾಮಾಗ್ರಿಗಳಿಗೆ ಸಂಬಂಧಿಸಿದಂತೆ ಐ.ಎಸ್.ಐ/ಬಿ.ಎಸ್.ಐ/ತತ್ಸಮಾನ ಸಂಸ್ಥೆಗಳಿಂದ ಪಡೆದ ದೃಡೀಕೃತ ಪತ್ರ ಲಗತ್ತಿಸಿರಬೇಕು.
4. ಸೋಲಾರ್ ತಂತಿ ಬೇಲಿಯು ಕನಿಷ್ಠ 5 ತಂತಿಗಳಿಂದ ಕೂಡಿರಬೇಕು ಹಾಗೂ ರಸ್ತೆಗಳು ಇರುವಲ್ಲಿ ಗೇಟ್‌ಗಳನ್ನು ನಿರ್ಮಿಸಬೇಕು.
5. ಸೋಲಾರ್ ತಂತಿ ಬೇಲಿಯ ನಿರ್ಮಾಣದ ಕೆಲಸವನ್ನು ಅರಣ್ಯ ಇಲಾಖೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ನಿರ್ವಹಿಸಿದ್ದಲ್ಲಿ ಅದರ ಬಗ್ಗೆ ತೃಪ್ತಿದಾಯಕ ಪತ್ರ ಬರೆದು ಪಡೆದು ಸಲ್ಲಿಸಬೇಕು.
6. ವನ್ಯಪ್ರಾಣಿಗಳನ್ನು ನಿಯಂತ್ರಿಸುವುದರ ಬಗ್ಗೆ ಗುತ್ತಿಗೆದಾರರು ಸಾಕಷ್ಟು ಜ್ಞಾನವನ್ನು ಹೊಂದಿರಬೇಕು.
7. ಪ್ರತಿಯೊಂದು ವನ್ಯಪ್ರಾಣಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ನಿರ್ಮಾಣ ಮಾಡುವ ತಂತಿ ಬೇಲಿಯಲ್ಲಿ ಅಳವಡಿಸಲಾಗುವ ತಂತಿಗಳ ಸಂಖ್ಯೆ, ಈ ತಂತಿಗಳ ಮಧ್ಯೆ ಇರುವ ದೂರ, ಭಾಗಗಳ ಸಂಖ್ಯೆ, ಮೂಲೆ ಕಂಬಗಳ ಸಂಖ್ಯೆ, ಕಂಬಗಳ ಸಂಖ್ಯೆ, ಮಧ್ಯ ಬರುವ ಕಂಬಗಳ ಸಂಖ್ಯೆ ಮತ್ತು ಇತ್ಯಾದಿ ಭಾಗಗಳು ರಚನೆಯ ವಿವರಗಳಲ್ಲಿ ಒಳಗೊಂಡಿರಬೇಕು.
8. ತಂತಿಬೇಲಿಯು ಪ್ರತಿ 100 ಮೀಟರ್‌ಗೆ ಭಾಗಗಳನ್ನೊಳಗೊಂಡಿರಬೇಕು
9. ಕನಿಷ್ಟ ಪ್ರತಿ 2 ತಿಂಗಳಿಗೊಮ್ಮೆ ಅಥವಾ ಅವಶ್ಯಕತೆ ಇದ್ದಾಗಲೆಲ್ಲಾ ತಪಾಸಣೆಯನ್ನು ಕಡ್ಡಾಯವಾಗಿ ಮಾಡಬೇಕು ಹಾಗೂ ಬೇಲಿಯು ಕಾರ್ಯನಿರತವಾಗಿರುವಂತೆ ನೋಡಿಕೊಳ್ಳಬೇಕು.
10. ಗುತ್ತಿಗೆದಾರರು ನೀಡುವ ದರಗಳು 3 ವರ್ಷಗಳ ನಿರ್ವಹಣಾ ಗುತ್ತಿಗೆಯ ವೆಚ್ಚಗಳನ್ನೊಳಗೊಂಡಿರುಬೇಕು.
11. ಸೋಲಾರ್ ತಂತಿ ಬೇಲಿಯನ್ನು ಪಾಲನೆ ಮಾಡಿ ನಿರ್ವಹಿಸಿದ ಬಗ್ಗೆ ಅರಣ್ಯ ಸಿಬ್ಬಂದಿಗಳಿಗೆ ಸಾಕಷ್ಟು ತರಬೇತಿಯನ್ನು ಉಚಿತವಾಗಿ ನೀಡುವುದಾಗಿ ಲಿಖಿತವಾಗಿ ತಿಳಿಸಬೇಕು.
12. ಸೌರಶಕ್ತಿ ತಂತಿ ಬೇಲಿಗೆ ಅಳವಡಿಸುವ ಸಾಮಾಗ್ರಿಗಳ ಗುಣಮಟ್ಟದ ಬಗ್ಗೆ ಕೇಂದ್ರ ಸರ್ಕಾರದ ಸಾಂಪ್ರದಾಯಕವಲ್ಲದ ಇಂಧನ ಗುಣಮಟ್ಟದ ಬಗ್ಗೆ ಚಾಲ್ತಿ ವರ್ಷದ ಪರೀಕ್ಷಣಾ ಪತ್ರ ಸಲ್ಲಿಸಬೇಕು.
13. ಸೌರಶಕ್ತಿ ತಂತಿ ಬೇಲಿಗೆ ಅಳವಡಿಸುವ ಬಿಡಿಭಾಗಗಳನ್ನು ಹಾಗೂ ಬ್ಯಾಟರಿಗಳನ್ನು ಬೇರೆ ಕಂಪನಿಗಳಿಂದ ಪಡೆದು ಸರಬರಾಜು ಮಾಡುತ್ತಿದ್ದ ಪಕ್ಷದಲ್ಲಿ ಆಯಾ ಕಂಪನಿಗಳ ಚಾಲ್ತಿ ವರ್ಷಕ್ಕೆ ಎಂ.ಎನ್.ಇ.ಎಸ್ ನಿಂದ ಅನುಮೋಧನೆಗೊಂಡು ಸರಬರಾಜು ಮಾಡುವ ಬಗ್ಗೆ ಪಡೆದ ಅನುಪತ್ರ ಹಾಗೂ ಪರೀಕ್ಷಣಾ ಪತ್ರ ಸಲ್ಲಿಸಬೇಕು ಸಾಂಪ್ರಾದಾಯಿಕವಲ್ಲದ ಇಂಧನ ಮೂಲಗಳ ಮಂತ್ರಾಲಯದ ಎಂ.ಎನ್.ಇ.ಎಸ್ ಇದರ ಅಧಿಕೃತ ಕೇಂದ್ರಗಳಿಂದ ಪಡೆದ ಪ್ರಮಾಣ ಪತ್ರ ಸಲ್ಲಿಸಬೇಕು ಹಾಗೂ ಉಪಕರಣಗಳ ಉತ್ಪಾಧನಾ ಲೈಸೆನ್ಸ್ ಹೊಂದಿರುವ ಬಗ್ಗೆ ದಾಖಲೆಗಳನ್ನು ಸಲ್ಲಿಸಬೇಕು.
14. ಅಳವಡಿಸುವ ಸಾಮಾಗ್ರಿಗಳು ಐ.ಎಸ್.ಐ ಗುಣಮಟ್ಟವುಳ್ಳದ್ದಾಗಿರಬೇಕು.
15. ಅಳವಡಿಸುವ ಸಾಮಾಗ್ರಿಗಳಿಗೆ ಗ್ಯಾರಂಟಿ ಅವಧಿಯನ್ನು ನಮೂದಿಸಬೇಕು.
16. ಸೌರಶಕ್ತಿ ತಂತಿ ಬೇಲಿಗೆ ಅಳವಡಿಸುವ ಸಾಮಾಗ್ರಿಗಳ ಮಾದರಿ ವಿವರಣೆಗಳನ್ನು ನಮೂದಿಸಬೇಕು.
17. ಅಳವಡಿಸಲಾಗುವ ಸೋಲಾರ್ ತಂತಿಬೇಲಿಯು ಕನಿಷ್ಠ 3ವರ್ಷದ ವರೆಗೆ ಚಾಲ್ತಿಯಲ್ಲಿರುವುದರ ಬಗ್ಗೆ ಗ್ಯಾರಂಟಿ ಪತ್ರ ನೀಡಬೇಕು.
18. ಯಶಸ್ವಿ ಬಿಡ್ಡುದಾರರು ಕಾಮಗಾರಿಯಲ್ಲಿ ಅಳವಡಿಸುವ ಸಾಮಾಗ್ರಿಗಳು ಸುಸ್ತಿಯಲ್ಲಿ ಇಲ್ಲದಿದ್ದಾಗ ಅದನ್ನು ಉಚಿತವಾಗಿ ದುರಸ್ಥಿ ಮಾಡಿಕೊಡಲು ಬದ್ಧರಾಗಿರುವ ಬಗ್ಗೆ ದೃಡೀಕರಣ ಪತ್ರ ನೀಡಬೇಕು.

19. ಯಶಸ್ವಿ ಮರು ಟೆಂಡರ್‌ದಾರರು ನಿರ್ಮಿಸುವ ಸೌರಶಕ್ತಿ ತಂತಿ ಬೇಲಿಯನ್ನು 3 ವರ್ಷದ ವರೆಗೆ ಸುಸ್ತಿಯಲ್ಲಿಟ್ಟು ನಿರ್ವಹಣೆ ಮಾಡುವ ಬಗ್ಗೆ ದೃಡೀಕರಣ ಪತ್ರ ನೀಡಬೇಕು ಮತ್ತು 3 ವರ್ಷದವರೆಗೆ ಉಚಿತವಾಗಿ ಬ್ಯಾಟರಿ ನಿರ್ವಹಣೆ ಮಾಡುವುದಾಗಿ ದೃಡೀಕರಣ ಪತ್ರ ಸಲ್ಲಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕಾವೇರಿ ವನ್ಯಜೀವಿ ವಿಭಾಗ,
ಕನಕಪುರ.

ಪಿ.ಆರ್. 13

**ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಚೇರಿ, ರಾಜ್ಯ ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು–1**

**ಅಧಿಸೂಚನೆ**

**ಟೆಂಡರ್ : ಬಹಿರಂಗ ಹರಾಜು**

**ಸಂಖ್ಯೆ: ಎಸ್‌ಬಿಎ/ಎಂಟಿ–1/421/2006–07, ದಿನಾಂಕ: ನೇ ಡಿಸೆಂಬರ್ 2008.**

**ವಿಷಯ:** ರಾಜ್ಯ ಗುಪ್ತವಾರ್ತೆ ಘಟಕದಲ್ಲಿ ನಿರುಪಯುಕ್ತ ಮೋಟಾರು ವಾಹನಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ರಾಜ್ಯ ಗುಪ್ತವಾರ್ತೆ ಘಟಕ, ಬೆಂಗಳೂರು ಕೇಂದ್ರಸ್ಥಾನದಲ್ಲಿರುವ **16** ವಾಹನಗಳನ್ನು ನಿರುಪಯುಕ್ತಗೊಳಿಸಿದೆ. ಅವುಗಳನ್ನು ಟೆಂಡರ್ : ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತದೆ. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಚೇರಿ ಅವರಣದಲ್ಲಿ ದಿನಾಂಕ: **21.01.2009** ರಂದು ಬೆಳಿಗ್ಗೆ **12.00** ಘಂಟೆಗೆ ಹರಾಜು ಮಾಡುವ ಬಗ್ಗೆ ಸಾರ್ವಜನಿಕರಿಗೆ ತಿಳಿಯ ಪಡಿಸಲು ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

| ಕ್ರಮ ಸಂಖ್ಯೆ | ವಾಹನ ನೋಂದಣಿ ಸಂಖ್ಯೆ | ಮಾಡಲ್ | ಖರೀದಿಸಿದ ವರ್ಷ |
|---|---|---|---|
| 1. | ಕೆಎ–01–ಜಿ–181 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1990 |
| 2. | ಕೆಎ–01–ಎಂ–9954 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 3. | ಕೆಎ–01–ಎಂ–9630 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 4. | ಕೆಎ–01–ಜಿ–1879 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 5. | ಕೆಎ–01–ಜಿ–858 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 6. | ಕೆಎ–01–ಜಿ–733 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 7. | ಕೆಎ–01–ಎಂ–9360 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 8. | ಕೆಎ–01–ಜಿ–833 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 9. | ಕೆಎ–01–ಜಿ–835 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1992 |
| 10. | ಸಿಎಇ–9784 ಅಂಬಾಸಿಡರ್ ಕಾರ್ | ಪೆಟ್ರೋಲ್ ವಾಹನ | 1981 |
| 11. | ಕೆಎ–01–ಎನ್–4336 ಫಿಯೆಟ್ ಕಾರ್ | ಪೆಟ್ರೋಲ್ ವಾಹನ | 1995 |
| 12. | ಕೆಎ–01–ಜಿ–122 ಮಹೀಂದ್ರ ಜೀಪ್ | ಡೀಸಲ್ ವಾಹನ | 1990 |

| ಕ್ರಮ ಸಂಖ್ಯೆ | ವಾಹನ ನೋಂದಣಿ ಸಂಖ್ಯೆ | ಮಾಡಲ್ | ಖರೀದಿಸಿದ ವರ್ಷ |
|---|---|---|---|
| 13. | ಕೆಎ–01–ಜಿ–123 ಮಹೀಂದ್ರ ಜೀಪ್ | ಡೀಸಲ್ ವಾಹನ | 1990 |
| 14. | ಕೆಎ–01–ಜಿ–124 ಮಹೀಂದ್ರ ಜೀಪ್ | ಡೀಸಲ್ ವಾಹನ | 1990 |
| 15. | ಕೆಎ–01–ಜಿ–336 ಮಾರುತಿ ಜಿಪ್ಸಿ | ಪೆಟ್ರೋಲ್ ವಾಹನ | 1991 |
| 16. | ಕೆಎ–01–ಜಿ–337 ಮಾರುತಿ ಜಿಪ್ಸಿ | ಪೆಟ್ರೋಲ್ ವಾಹನ | 1991 |

ಮೇಲ್ಕಂಡ ನಿರುಪಯುಕ್ತ ಮೋಟಾರು ವಾಹನಗಳನ್ನು ಸಾರ್ವಜನಿಕರ ವೀಕ್ಷಣೆ/ ಪರಿಶೀಲನೆಗಾಗಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಚೇರಿಯ ಆವರಣದಲ್ಲಿ ನಿಲ್ಲಿಸಿದ್ದು ಸಾರ್ವಜನಿಕರು ಎಲ್ಲಾ ಕೆಲಸದ ದಿನಗಳಲ್ಲಿ ಕಚೇರಿ ವೇಳೆಯಲ್ಲಿ ಪರೀಕ್ಷಿಸಬಹುದು. ಟೆಂಡರ್ ಫಾರಂಗಳನ್ನು, ನಿಬಂಧನೆ ಮತ್ತು ಷರತ್ತುಗಳ ವಿವರಗಳನ್ನು ಈ ಕಚೇರಿಯ (ಎಂ.ಟಿ.ಓ.) ರವರಿಂದ/ವಾಹನ ಶಾಖೆ ಅಧಿಕಾರಿ ರವರಿಂದ ಪಡೆಯಬಹುದು.

ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: **20.01.2009** ರಂದು ಸಂಜೆ **05.00** ಘಂಟೆ ಒಳಗಾಗಿ ಈ ಕಚೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಪರವಾಗಿ,
ರಾಜ್ಯ ಗುಪ್ತವಾರ್ತೆ, ಬೆಂಗಳೂರು.

**ನಿಬಂಧನೆ ಮತ್ತು ಷರತ್ತುಗಳು**

1. ಮೋಟಾರು ವಾಹನಗಳ ಬಹಿರಂಗ ಹರಾಜನ್ನು ದಿನಾಂಕ: **21.01.2009** ರಂದು ಬೆಳಗ್ಗೆ **12.00** ಗಂಟೆಗೆ ಐ.ಜಿ.ಪಿ., ಗುಪ್ತವಾರ್ತೆ, ನೃಪತುಂಗ ರಸ್ತೆ, ಬೆಂಗಳೂರು ರವರ ಕಚೇರಿಯ ಆವರಣದಲ್ಲಿ ನಡೆಸಲಾಗುವುದು.
2. ಮೋಟಾರು ವಾಹನಗಳನ್ನು ಎಲ್ಲಿ ಹೇಗಿದೆಯೋ (As is and where is basis) ಅದೇ ಪರಿಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3. ಟೆಂಡರ್ ಫಾರಂಗಳನ್ನು ಐ.ಜಿ.ಪಿ, ಗುಪ್ತವಾರ್ತೆ, ಬೆಂಗಳೂರು ರವರ ಕಚೇರಿಯ ವಾಹನ ಶಾಖೆ (ಎಂ.ಟಿ.ಓ.) ಯಿಂದ ಪಡೆಯಬಹುದಾಗಿದೆ. ಫಾರಂಗಳಿಗಾಗಿ ಹಣವನ್ನು ಸಂದಾಯ ಮಾಡುವ ಅಗತ್ಯವಿಲ್ಲ.
4. ಟೆಂಡರ್ ಫಾರಂಗಳನ್ನು ದ್ವಿಪ್ರತಿಯಲ್ಲಿ ಸಲ್ಲಿಸಬೇಕು ಹಾಗೂ ಭರ್ತಿಮಾಡಿದ ಫಾರಂಗಳನ್ನು ಒಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು. ಮೊಹರು ಮಾಡಿದ ಲಕೋಟೆಗಳನ್ನು ಐ.ಜಿ.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಹೆಸರಿನಲ್ಲಿ ಸಲ್ಲಿಸಬೇಕು ಮತ್ತು ಲಕೋಟೆಗಳ ಮೇಲೆ ಮೋಟಾರು ವಾಹನಗಳನ್ನು ಖರೀದಿಸುವುದಕ್ಕಾಗಿ ಟೆಂಡರ್ ಫಾರಂ ಎಂದು ನಮೂದಿಸಬೇಕು.
5. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಅರ್ನೆಸ್ಟ್‌ಮೊನಿ (ಇಎಂಡಿ) ಠೇವಣಿಯೊಂದಿಗೆ (ಡಿಮ್ಯಾಂಡ್ ಡ್ರಾಫ್ಟ್ ಮಾತ್ರ ಸಲ್ಲಿಸಬೇಕು.) ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು ಮತ್ತು ಲಕೋಟೆಯನ್ನು ಎಂ.ಟಿ.ಓ., ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರಿಗೆ ಸಲ್ಲಿಸಿ ಸ್ವೀಕೃತಿಯನ್ನು ಪಡೆಯಬಹುದು.
6. ಟೆಂಡರ್ ಫಾರಂಗಳನ್ನು ಮೋಟಾರು ವಾಹನಗಳಿಗೆ ನಮೂದಿಸಲಾಗುವ ಮೊತ್ತವನ್ನು ಸಂಖ್ಯೆ ಮತ್ತು ಪದಗಳೆರಡರಲ್ಲಿಯೂ ಸ್ಪಷ್ಟವಾಗಿ ಬರೆಯಬೇಕು.
7. ಟೆಂಡರ್ ಫಾರಂಗಳನ್ನು ವರ್ಗಾಯಿಸಬಾರದು ಹಾಗೂ ಎಲ್ಲಾ ವಾಹನಗಳಿಗೆ ಒಂದೇ ಟೆಂಡರ್ ಫಾರಂನ್ನು ಉಪಯೋಗಿಸಬಹುದು. (ಒಂದು ವಾಹನಕ್ಕೆ ರೂ.1000.00 ರಂತೆ ಇ.ಎಂ.ಡಿ ಸಲ್ಲಿಸಬೇಕು).
8. ಪ್ರತಿ ಟೆಂಡರ್ ಫಾರಂನೊಂದಿಗೆ **ರೂ. 1,000.00** (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ಅರ್ನೆಸ್ಟ್‌ಮೊನಿ ಡಿಪಾಸಿಟ್‌ನ್ನು ಸಲ್ಲಿಸಿರಬೇಕು. ಅರ್ನೆಸ್ಟ್‌ಮೊನಿ ಡಿಪಾಸಿಟ್‌ನ್ನು (ಇಎಂಡಿ) ಮೊತ್ತ **ರೂ.1000.00** ಗಳನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆಯಲಾದ ಡಿಮ್ಯಾಂಡ್ ಡ್ರಾಫ್ಟ್‌ನ (ಡಿ.ಡಿ) ಮೂಲಕ ಮಾತ್ರ ಸಲ್ಲಿಸಬೇಕು. ಅರ್ನೆಸ್ಟ್ ಡಿಪಾಸಿಟ್ ಮೊತ್ತವನ್ನು ನಗದು ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ ಮತ್ತು ಡಿಪಾಸಿಟ್ ಇಲ್ಲದೆ ಸಲ್ಲಿಸಲಾದ ಟೆಂಡರ್ ಫಾರಂನ್ನು ತಿರಸ್ಕರಿಸಲಾಗುವುದು. ಅರ್ನೆಸ್ಟ್‌ಮೊನಿ ಡಿಪಾಸಿಟ್ ಮೊತ್ತಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ.
9. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: **20.01.2009** ರಂದು ಸಂಜೆ 05.00 ಗಂಟೆಯೊಳಗೆ ಈ ಕಚೇರಿಗೆ ತಲಪುವಂತೆ ಸಲ್ಲಿಸಬೇಕು. ದಿನಾಂಕ: **21.01.2009** ರ ನಂತರ ಸ್ವೀಕರಿಸಲಾದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.

10. **ರೂ. 1000.00** ಗಳ ಅರ್ನೆಸ್ಟ್ ಡಿಪಾಸಿಟ್‌ನೊಂದಿಗೆ ಟೆಂಡರ್ ಫಾರಂಗಳನ್ನು ಸಲ್ಲಿಸಿರುವವರಿಗೂ ಸಹ ದಿನಾಂಕ: **21.01.2009** ರಂದು ಬೆಳಗ್ಗೆ **12.00** ಗಂಟೆಗೆ ನಡೆಸಲಾಗುವ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ. ಹೀಗೆ ಹರಾಜಿನಲ್ಲಿ ಭಾಗವಹಿಸುವುದಕ್ಕಾಗಿ ಇವರು ಪುನ: ಅರ್ನೆಸ್ಟ್ ಡಿಪಾಸಿಟ್‌ನ್ನು (ಇಎಂಡಿ) ಕೊಡಬೇಕಿಲ್ಲ.
11. ಮೋಟಾರು ವಾಹನಗಳ ಸಂಖ್ಯೆ ಮತ್ತು ಬೆಲೆಯನ್ನು ಪದಗಳಲ್ಲಿ ಸ್ಪಷ್ಟವಾಗಿ ನಮೂದಿಸದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ನಲ್ಲಿ ನಮೂದಿಸಲಾಗುವ ಮೊತ್ತದಲ್ಲಿ ಯಾವುದೇ ತಿದ್ದುಪಡಿ ಇದ್ದಲ್ಲಿ ಅದನ್ನು ಟೆಂಡರ್ ಫಾರಂನ್ನು ಸಲ್ಲಿಸುವವರು ಪೂರ್ಣ ಸಹಿ ಮಾಡಿ ದೃಢೀಕರಿಸಿರಬೇಕು.
12. ಸಾರ್ವಜನಿಕ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ದಿನಾಂಕ: **21.01.2009** ರ ಬೆಳಗ್ಗೆ **10.30** ಗಂಟೆಯೊಳಗಾಗಿ **1000.00 ರೂ.** ಗಳ ನಗದು ಠೇವಣಿಯನ್ನು ಕಚೇರಿಯ ನಗದು ಶಾಖೆಯಲ್ಲಿ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. **1000.00 ರೂ.** ಗಳ ಠೇವಣಿಯನ್ನು ಪಾವತಿ ಮಾಡದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಹರಾಜಿನಲ್ಲಿ ಯಶಸ್ವಿಯಾಗದವರಿಗೆ ಠೇವಣಿ ಹಣ **1000.00 ರೂ.** ಗಳನ್ನು ಕೂಡಲೇ ವಾಪಸ್ ಕೊಡಲಾಗುವುದು. ಹರಾಜಿನಲ್ಲಿ ಯಶಸ್ವಿಯಾದವರಿಗೆ ಠೇವಣಿ ಹಣವನ್ನು ಕೂಡಲೇ ವಾಪಸ್ ಕೊಡಲಾಗುವುದಿಲ್ಲ.
13. ಐ.ಜಿ.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಮೇಲುಸ್ತುವಾರಿಯಲ್ಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ದಿನಾಂಕ: **21.01.2009** ರಂದು ಹರಾಜನ್ನು ನಡೆಸುವರು. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಮೋಟಾರು ವಾಹನಗಳಿಗೆ ತಮ್ಮ ಬೆಲೆಯನ್ನು ಕೂಗಬಹುದಾಗಿದೆ.
14. ಐ.ಜಿ.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಹರಾಜಿನ ನಂತರ ಮೊಹರಾದ ಟೆಂಡರ್‌ಗಳನ್ನು ಬಿಡ್‌ದಾರರ ಅಥವಾ ಅವರ ಏಜೆಂಟ್‌ರ್‌ರವರು ಯಾರು ಹಾಜರಿರುತ್ತಾರೋ ಅವರ ಸಮ್ಮುಖದಲ್ಲಿ ಅದೇ ದಿನದಂದು ಒಡೆಯುವರು. ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಯಾವುದರಲ್ಲಿ ಹೆಚ್ಚಿನ ಮೊತ್ತ ದೊರಕುವುದೋ ಅಂತಹ ಟೆಂಡರ್/ಹರಾಜನ್ನು ಪರಿಗಣಿಸಲಾಗುವುದು ಮತ್ತು ಸ್ವೀಕರಿಸಲಾಗುವುದು.
15. ಯಶಸ್ವಿಯಾದ ಬಿಡ್ಡುದಾರರು ಅಥವಾ ಟೆಂಡರುದಾರರು ಒಟ್ಟು ಮೊತ್ತದಲ್ಲಿ ಶೇಕಡಾ **25%** ರಷ್ಟು ಮೊತ್ತವನ್ನು ಕೂಡಲೇ ಐ.ಜಿ.ಪಿ, ಗುಪ್ತವಾರ್ತೆ, ಬೆಂಗಳೂರು ರವರ ಕಚೇರಿಯ ಲೆಕ್ಕ ಶಾಖೆಯಲ್ಲಿ ನಗದು ಹಣವನ್ನು ಪಾವತಿ ಮಾಡತಕ್ಕದ್ದು. ದೃಢೀಕರಣ ಪತ್ರ ಬಿಡ್ಡುದಾರರಿಗೆ/ಟೆಂಡರ್‌ದಾರರಿಗೆ ತಲುಪಿದ 8 ದಿನಗಳೊಳಗಾಗಿ ಬಾಕಿ ಶೇಕಡಾ **75%** ರಷ್ಟು ಮೊತ್ತ ಮತ್ತು ತೆರಿಗೆ ಹಣವನ್ನು ಪಾವತಿ ಮಾಡತಕ್ಕದ್ದು ಹಾಗೂ ಮೋಟಾರು ವಾಹನಗಳನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಬಿಡ್ಡಿನ/ಟೆಂಡರಿನ ಪೂರ್ತಿ ಮೊತ್ತವನ್ನು ಪಾವತಿ ಮಾಡಿ ಹಣವನ್ನು ತೆಗೆದುಕೊಳ್ಳದಿದ್ದಲ್ಲಿ ಬಿಡ್ಡುದಾರರ/ಟೆಂಡರ್‌ದಾರರ ಬಿಡ್ಡನ್ನು ರದ್ದುಗೊಳಿಸಲಾಗುವುದು ಹಾಗೂ ಮೋಟಾರು ವಾಹನಗಳನ್ನು ಮಾರಾಟ ಮಾಡುವುದಕ್ಕೆ ಪ್ರತ್ಯೇಕವಾಗಿ ಕ್ರಮವನ್ನು ತೆಗೆದುಕೊಳ್ಳಲಾಗುವುದು. ಹಣವನ್ನು ಪಾವತಿ ಮಾಡುವುದಕ್ಕೆ ಸಂಬಂಧಿಸಿದಂತೆ ಹುಂಡಿಗಳನ್ನು ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸ್ವೀಕರಿಸಲಾಗುವುದಿಲ್ಲ.
16. ಎಲ್ಲಾ ನಗದು ಪಾವತಿಗಳನ್ನು ಐ.ಜಿ.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಕಚೇರಿಯ ಲೆಕ್ಕ ಶಾಖೆಯಲ್ಲಿ ಮಾತ್ರ ಮಾಡತಕ್ಕದ್ದು.
17. ಟೆಂಡರ್‌ದಾರರು/ಬಿಡ್ಡುದಾರರು ಪಾವತಿ ಮಾಡಿರುವ ಅರ್ನೆಸ್ಟ್‌ಮನಿ ಠೇವಣಿ ಹಣವನ್ನು ಮೋಟಾರು ವಾಹನದ ಬಾಕಿ ಇರುವ ಶೇಕಡಾ **75%** ರಷ್ಟು ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದಿಲ್ಲ. ಬಿಡ್ಡುದಾರರು ಎಲ್ಲಾ ನಿಬಂಧನೆ ಮತ್ತು ಷರತ್ತುಗಳನ್ನು ಪೂರೈಸುವ ಮೂಲಕ ಮೋಟಾರು ವಾಹನವನ್ನು ತಮ್ಮ ವಶಕ್ಕೆ ಪಡೆದ ನಂತರ ಈ ಅರ್ನೆಸ್ಟ್ ಠೇವಣಿ ಮೊತ್ತ **ರೂ. 1,000.00** ಗಳನ್ನು ಲೆಕ್ಕ ಶಾಖೆಯಿಂದ ವಾಪಸ್ ಪಡೆಯಬಹುದಾಗಿದೆ.
18. ಯಶಸ್ವಿ ಬಿಡ್ಡುದಾರರು ನಿಗದಿತ ಅವಧಿಯಲ್ಲಿ ಹಣವನ್ನು ಪಾವತಿ ಮಾಡದಿದ್ದಲ್ಲಿ ಅಥವಾ ಈ ಇಲಾಖೆಗೆ ಯಾವುದೇ ರೀತಿಯ ನಷ್ಟ ಉಂಟು ಮಾಡಿದಲ್ಲಿ ನಷ್ಟದ ಮೊತ್ತವನ್ನು ಅರ್ನೆಸ್ಟ್‌ಮನಿ ಡಿಪಾಸಿಟ್ ಹಾಗೂ ಪಾವತಿ ಮಾಡಲಾದ ಬಿಡ್ಡಿನ ಶೇಕಡ **25%** ರಷ್ಟು ಮೊತ್ತದಿಂದ ವಸೂಲಿ ಮಾಡಲಾಗುವುದು. ಅಥವಾ ಡಿಪಾಸಿಟ್ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಕಾನೂನಿನ ಕ್ರಮವನ್ನು ಸಹ ಜರುಗಿಸಲಾಗುವುದು.
19. ಮಾರಾಟ ತೆರಿಗೆ ಮತ್ತು ಇತರೆ ಛಾರ್ಜ್‌ಗಳನ್ನು ಮಾರಾಟದ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ (ಬಿಡ್ಡಿನ ಅಥವಾ ಹರಾಜಿನ ಮೊತ್ತಕ್ಕೆ) ವಿಧಿಸಲಾಗುವುದು.
20. ಯಶಸ್ವಿ ಬಿಡ್ಡುದಾರರು/ಟೆಂಡರ್‌ದಾರರು ತಮ್ಮ ಸ್ವಂತ ವೆಚ್ಚದಿಂದ ಮೋಟಾರು ವಾಹನಗಳ ಸಾಗಾಣಿಕೆಗಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.
21. ಐ.ಜಿ.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರು ಯಾವುದೇ ಕಾರಣವನ್ನು ನೀಡದೇ ಟೆಂಡರ್/ಹರಾಜನ್ನು ಸ್ವೀಕರಿಸುವ, ತಿರಸ್ಕರಿಸುವ, ಮುಂದೂಡುವ ಅಥವಾ ರದ್ದುಪಡಿಸುವ ಹಕ್ಕನ್ನು ಹೊಂದಿರುತ್ತಾರೆ. ಐ.ಜಿ.ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ ಮತ್ತು ಅವರ ತೀರ್ಮಾನಕ್ಕೆ ಎಲ್ಲರೂ ಬದ್ಧರಾಗಿರಬೇಕಾಗುತ್ತದೆ.
22. ಈ ಮೋಟಾರು ವಾಹನಗಳ ಮಾರಾಟದ ಒಪ್ಪಂದದಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ನಿರ್ಣಯ ಅಂತಿಮವಾಗಿದೆ.

